Photo by Pranlal K. Patel



ಬಹುಮಾನ
ಪಡೆದ ಶೀರ್ಷಿಕೆ

ಕಲಿತನ

ಕಳಿಸಿದವರು:
ಕೆ. ಎಚ್. ದೇಶಪಾಂಡೆ, ಧಾರವಾಡ

ಕನ್ನಡದಲ್ಲಿ

# ಸಿನಿಮಾ

## ಸಿನಿಮಾ ಮಾಸಪತ್ರಿಕೆ



ಮೊದಲನೆ ಸಂಚಿಕೆ 1953 ನೇ ಜನವರಿಯಲ್ಲಿ ಹೊರಡುತ್ತದೆ!

ಬಿಡಿಸಂಚಿಕೆ
**0 - 8 - 0**



ವಾರ್ಷಿಕ ಚಂದಾ
**ರೂ. 6 - 0 - 0**

ಪಾಠಕರ ಲೇಖನಗಳು, ಸಂದೇಹ – ಸಮಾಧಾನಗಳು, ಚಿತ್ರವಾರ್ತೆಗಳು, ಸ್ಕೆಚ್ಚ್‌ಗಳು, ಸಿನಿಮಾ ಕಥೆಗಳು ಇನ್ನೂ ವಿವಿಧ ಶೀರ್ಷಿಕೆಗಳಿಂದ, ಮುದ್ದಾದ ಮುದ್ರಣದಿಂದ, ಅಂದವಾದ ಫೋಟೋಗಳಿಂದ ಸರ್ವಾಂಗ ಸುಂದರವಾಗಿ, ಸಿನಿಮಾ ಪಾಠಕಲೋಕವನ್ನು ರಂಜನೆ ಮಾಡುತ್ತದೆ.

ಪ್ರತಿಗಳಿಗೆ ನಿಮ್ಮ ಏಜಂಟರನ್ನು ಕೇಳಿರಿ !

: ವಿವರಗಳಿಗೆ :

## ಚಂದಮಾಮ ಪಬ್ಲಿಕೇಷನ್ಸ್

ವಡಪಳನಿ :: ಮದರಾಸು - 26.

# ಸೂಚನೆ

ಬರುವ ತಿಂಗಳ "ಚಂದಮಾಮ" ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್,

ವಡಪಳನಿ, :: ಮದ್ರಾಸ್ — 26

## ಆರು ಭಾಷೆಗಳಲ್ಲಿ ಚಂದಮಾಮ

*

ತೆಲುಗು–ಚಂದಮಾಮ, ಕನ್ನಡ–ಚಂದಮಾಮ, ಹಿಂದೀ–ಚಂದಮಾಮ, ತಮಿಳು–ಅಂಬುಲಿಮಾಮ, ಮಲೆಯಾಳ–ಅಂಬಿಳಿ ಅಮ್ಮಾವನ್, ಮರಾಠಿ–ಚಾಂದೋಬಾ,

ಪ್ರತಿ ಭಾಷೆಯಲ್ಲಿಯೂ

ವಾರ್ಷಿಕ ಚಂದಾ 4—8—0
ಎರಡು ವರ್ಷಗಳಿಗೆ 8—0—0

*

ಬಿಡಿ ಸಂಚಿಕೆ 0—6—0

ಚಂದಮಾಮ ಪಬ್ಲಿಕೇಷನ್ಸ್,

ವಡಪಳನಿ, :: ಮದ್ರಾಸು – 26

## ಪಿಕ್‌ನಿಕ್‌ಗಳಿಗೆ ಸ್ವಲ್ಪ ಕೊಂಡೋಗಿ

ಅದಾಗಲಿ
ಮಾರ್ಟನ್‌ನವರದ್ದು

MORTON's

ಪ್ರಖ್ಯಾತಿಪಟ್ಟ ಮಿಠಾಯಿಗಳು

ಕ್ರೀಮ್ ಟಾಫಿ ಮತ್ತು ತಾಜಾ ಹಣ್ಣು ಕೂಡಿರುವ ಮಿಠಾಯಿಗಳಿಗೆ ಕೇಳಿರಿ

ಸಿ. ಅಂಡ್ ಇ. ಮಾರ್ಟನ್ (ಇಂಡಿಯಾ) ಲಿ.

ASP M-13



## ಡೋಂಗರೇ ಬಾಲಾಮೃತ

★

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರ ಬೀಳಲು ಸಹಾಯವಾಗುತ್ತದೆ.



Real Gold Sheet Covered RAJA BRAND ORNAMENTS

10 YEARS GUARANTEED

RAJA GOLD COVERING COMPANY MASULIPATAM.

ರೌಂಡು, ಬಾದಾಮಿ, ಕಾಫಿ, ಚಂದ್ರಹಾರಗಳು, 24" ಒಂದೆಳೆಗೆ ರೂ. 11/- ಕರಿಮಣಿ ಚೈನು 18" 1ಕ್ಕೆ ರೂ. 5/-. 800 ಡಿಜೈನುಗಳ ಕ್ಯಾಟಲಾಗು ಉಚಿತ. ಪೋಸ್ಟೇಜು 1/-

ರಾಜಾ ಗೋಲ್ಡು ಕವರಿಂಗ್ ಕಂಪೆನಿ (ರಿಜಿ.)
ರಾಜಾ ಬಿಲ್ಡಿಂಗ್ಸ್; ಮಚಲಿಪಟ್ಟಣ.

ಗ್ರೈಪ್ ಸಿರಪ್ - ಐ. ಟಿ. ಎಲ್.

ನಿಮ್ಮ ಮುದ್ದು ಕಂದನ ಅಜೀರ್ಣ ವ್ಯಾಧಿಗಳನ್ನು
ತಡೆದು ಆರೋಗ್ಯ ಕಾಪಾಡುವ ಅಮೃತಪಾನ.

ತಯಾರಕರು:

ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್
ಟೆಸ್ಟಿಂಗ್ ಲ್ಯಾಬೋರಟರಿ, ಲಿ.,

ಮಲ್ಲೇಶ್ವರಂ – ಬೆಂಗಳೂರು – 3

ಎಲ್ಲಾ ಪ್ರಮುಖ ವ್ಯಾಪಾರಿಗಳಲ್ಲೂ
ದೊರೆಯುತ್ತದೆ



ವ್ಯಾಪಾರದ ಗುರುತು  ಗ್ರೈಪ್ ಸಿರಪ್



ನಂಬಿಕೆಗೆ ಅರ್ಹತೆ! ....

ಅತ್ಯುತ್ತಮ ಟಾಯಿಲೆಟ್ ಸಾಬೂನಿನಲ್ಲಿ
ನೀವು ಏನೇನು ಗುಣಗಳನ್ನು
ಅಪೇಕ್ಷಿಸುವಿರೊ ಅವೆಲ್ಲಾ

ಮೈಸೂರು ಸ್ಯಾಂಡಲ್ ಸೋಪಿನಲ್ಲಿ

ಇರುವುವು ಎಂದು ಖಚಿತವಾಗಿ ಹೇಳುತ್ತೇವೆ.
ಎಲ್ಲಾ ಕಡೆಗಳಲ್ಲೂ ದೊರಕುವುದು.

ಗವರ್ನ್‌ಮೆಂಟ್ ಸೋಪ್ ಫ್ಯಾಕ್ಟರಿ, ಬೆಂಗಳೂರು.

## ಕನ್ನಡ ರಿಕಾರ್ಡುಗಳು

ಪೂರ್ಣ ಮಹಾಭಾರತ 18 ಭಾಗಗಳು 44 ರಿಕಾರ್ಡುಗಳು ಪೂರ್ಣ ಸೆಟ್ಟು ಸ್ಟೀಲ್ ಬಾಕ್ಸು ಬೀಗ ಬೀಗದಕ್ಕೈ ಸಹಿತ ರೂ. 130/- ಫ್ರಿಡಿಲಿವರಿ ಬಾಕ್ಸು ಬೇಡವಾದಲ್ಲಿ ರೂ. 7-8-0 ಕಮ್ಮಿ, ಅಂದರೆ 44 ರಿಕಾರ್ಡುಗಳು ಕೇವಲ ರೂ. 122-8-0. ಚಿಲ್ಲರೆ ತೆಗೆದರೆ ಒಂದು ರಿಕಾರ್ಡು ರೂ. 3/-

ಜವಾಬಿಗೆ 0-4-0 ಸ್ಟಾಂಪು ಕಳಿಸಿ.

ರೂ. 60/- ಲಾಗಾಯಿತು 650/- ವರೆಗೆ ಗ್ರಾಮಾಫೋನ್‌ಗಳು, 2-8-0 ಲಾಗಾಯಿತು ಸ್ಪ್ರಿಂಗ್‌ಗಳು, 3-0-0 ಲಾಗಾಯಿತು ಸೌಂಡ್ ಬಾಕ್ಸುಗಳು, 0-8-0 ಲಾಗಾಯಿತು 200 ಗ್ರಾಮಾಫೋನ್ ಸೂಜಿಗಳು, ಯಾವ ಗ್ರಾಮಾಫೋನು ಸಾಮಾನುಗಳು ಬೇಕಾದರೂ ರೆಡಿ ಸ್ಟಾಕು ಇರುತ್ತೆ.

ಸೀತಾಫೋನ್ ಕಂಪೆನಿ, ಬೆಂಗಳೂರು-2.



ಮನ್ನಣೆಗೂ ನಂಬುಗೆಗೂ ಹೆಸರಾದುವು!

## ಅರುಣಾ ದುಸ್ತುಗಳು




'ಬಿನ್ನೀ' ಬಟ್ಟೆಗಳಿಂದ

ತಯಾರಿಸಲ್ಪಟ್ಟುವು



ಏಜನ್ಸಿಯ ವಿವರಗಳಿಗೆ:

ಅರುಣಾಡ್ರೆಸ್ ಮೊನ್ಯುಫ್ಯಾಕ್ಚರಿಂಗ್ ಕಂಪೆನಿ

K 81, ಚಿಕ್ಕಪೇಟೆ, ಬೆಂಗಳೂರು-2



## ಮಧುರ ಮಂದಹಾಸಗಳು





ನಿಮ್ಮ ಮಕ್ಕಳಿಗೆ ಪ್ರಿಯವಾದ

ಲಾಜೆನ್ಜುಗಳು, ಪೆಪ್ಪರಮೆಂಟುಗಳು,

ಟಾಫೀಗಳು, ಚಾಕಲೇಟುಗಳು



**M. A. P. INDUSTRIES**

TONDIARPET : MADRAS-21



ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ

ಸಂಪುಟ ೯] ಡಿಸೆಂಬರ್ ೧೯೫೭ [ಸಂಚಿಕೆ ೬

ಕಳೆದ ಸಂಚಿಕೆಯೊಂದಿಗೆ 'ಅಪೂರ್ವಸ್ತಂಭ' ಮುಗಿದು ಹೋಯಿತು. ಈ ಸಂಚಿಕೆಯಿಂದ 'ರತ್ನ ಕಿರೀಟ' ವೆಂಬ ಸುಂದರ ಕಥಾ ವಾಹಿನಿ ಪ್ರಾರಂಭ ವಾಗಿದೆ. ಇದು ಅಡಿಗಡಿಗೂ, ಅದ್ಭುತ ಘಟನೆಗಳಿಂದ ಹರಿಯುತ್ತ, ಕೌತುಕವಾಗಿಯೂ ಸ್ವಾರಸ್ಯವಾಗಿಯೂ ಇರುವುದನ್ನು ನೀವೇ ನೋಡುವಿರಿ. ಹೊಸ ವರ್ಷದ 'ಚಂದಮಾಮ' ನನ್ನು ಹೊಸ ಮಾರ್ಪಾಡುಗೊಳಿಸ ಬೇಕೆಂದಿದ್ದೇವೆ. ಆದರೆ ಇದುವರೆಗೆ ಬಂದ ಶೀರ್ಷಿಕೆಗ ಳಲ್ಲಿ ನಿಮಗೆ ಪ್ರೀತಿಯವು ಯಾವುವು? ಬೇಡದ್ದು ಯಾವುವು? ಹೊಸತಾಗಿ ಬೇಕಾದ್ದು ಯಾವುವು? ಎಂಬುದನ್ನು ಚೆನ್ನಾಗಿ ಯೋಚಿಸಿ ನೀವೇ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಕನ್ನಡಣ್ಣ,
ಚಂದಮಾಮಾ ಆಫೀಸು, ಮದರಾಸು-26.



# ಗುಂಡು-ಚದರ



ಹಳ್ಳಿಯ ಶಾಲೆಯ ಮಾಸ್ತರರೊಂದಿನ
ತರಗತಿಯಲಿ ಹುಡುಗರನ್ನೋಡಿ
"ಮುದ್ದು ಮಕ್ಕಳೇ, ಮುಖ್ಯವಾದೊಂದು
ಮಾತು ಹೇಳುವೆನು ಮನಸುಕೊಡಿ :—

ಈ ಶಾಲೆಗೆ ಇನ್ನೊಂದು ತಿಂಗಳಲಿ
ಇನಸ್ಪೆಕ್ಟರು ಬರುತಾರೆ,
ನಿಮ್ಮನ್ನೆಲ್ಲಾ ಪರೀಕ್ಷೆಮಾಡಲು
ಹಲವು ಪ್ರಶ್ನೆಗಳ ಕೇಳ್ತಾರೆ

ಆಗ ನೀವು ಏನೊಂದು ವಸ್ತುವನು
ಹೋಲಿಸಿ ನೆನವಿಂದುತ್ತರಿಸಿ ;
ಉದಾಹರಣೆಗೆ 'ಭೂಮಿಯು ಹೇಗಿದೆ?'
ಎಂದು ಕೇಳ್ವರೆಂದೇ ನೆನೆಸಿ,

ಆಗ ನೀವೇನು ಹೇಳುವಿರೆಂದರೆ,—
ನೋಡಿರಿ ನನ್ನೀ ಪುಡಿಬುರುಡೆ !
ಹೀಗೇ ಭೂಮಿಯು ಗುಂಡಾಗಿದೆ. ಈ
ಹೋಲಿಕೆ ನೆನಪಿಡಿ—ಪುಡಿಬುರುಡೆ!"

ಹೀಗಾ ಮಾಸ್ತರು ಪುಡಿಬುರುಡೆಯನು
ಮಕ್ಕಳ ಮನಸಿಗೆ ಹಿಡಿಸಿದರು.
ಮಕ್ಕಳುಕೂಡಾ ಮಾಸ್ತರ ಮಾತನು
ಕಿವಿಗೊಟ್ಟಾಲಿಸಿ ಕೇಳಿದರು.

ಮುಖ್ಯವಾಗಿ ಪುಡಿಬುರುಡೆಯ ಹೋಲಿಕೆ
ಮಕ್ಕಳ ಮನದಲಿ ನಿಂತೋಯ್ತು.
ಈ ಪ್ರಶ್ನೆಯ ತಾವ್ ಗೆಲ್ಲುವೆವೆನ್ನುತ।
ತರಗತಿಗೇ ಬಲು ಹಿಗ್ಗಾಯ್ತು.

ಆದರೆ ಮಾಸ್ತರು ಒಂದು ವಿಷಯವನು
ಮರೆತೇಹೋದರು ಶಾಲೆಯಲಿ.
ಎರಡು ಪುಡಿಬುರುಡೆ ಅವರಲ್ಲಿದ್ದುವು
ಗುಂಡು-ಚದರದಾಕೃತಿಗಳಲಿ!

ಶಾಲೆಯ ದಿನ ಗುಂಡಗಿನ ಬುರುಡೆಯನು
ಚದರದ ಬುರುಡೆಯ ರಜೆಯ-ದಿನ
ಹೀಗಾ ಮಾಸ್ತರು ಉಪಯೋಗಿಸುವದ
ನೋಡಿದ್ದಿತು ಬಾಲಕರ ಮನ.

ಅಂದುಕೊಂಡಂತೆ ಬಂದೇಬಂದರು
ಇನಸ್ಪೆಕ್ಟರೊಂದಿನ ಬೇಗ.
ತರಗತಿಗವರು ಪ್ರವೇಶಿಸುತ್ತಲೆ
ಮಕ್ಕಳೆಲ್ಲ ಮಣಿದರು ಆಗ.

ಇನಸ್ಪೆಕ್ಟರು ಹುಡುಗರ ನೋಡುತ
ಊಹಿಸಿದಂತೆಯೆ ಕೇಳಿದರು :—
"ಭೂಮಿಯು ಹೇಗಿದೆ?' ಎಂಬುದ ಕೇಳುತ
ಹುಡುಗರೆಲ್ಲ ಬಲುಹಿಗ್ಗಿದರು.

ದಿಟ್ಟ ಹುಡುಗನೊಬ್ಬ ತಟ್ಟನೆ ಎದ್ದು
"ಶಾಲೆಯಿದ್ದದಿನ ಗುಂಡಗಿದೆ,
ಇಲ್ಲದ ದಿನ ಚದರಾಗಿದೆ" ಎಂದು
ನುಡಿದ ನೇನೂ ಸಂದೇಹಿಸದೆ!"

ಕೇಳಿ ಇನಸ್ಪೆಕ್ಟರು ಮಾಸ್ತರನು
ಕೋಪದ ಉರಿಯಲಿ ನೋಡಿದರು.
ಮಾಸ್ತರು ಪಾಪ, ಬಾಡಿಹೋಗುತಿರೆ,
ಮಕ್ಕಳೇಕೋ ನಗೆಯಾಡಿದರು!







1


2


3


4


5


6


7


8


9

ಇಲ್ಲಿ ಒಂಭತ್ತು ಚಿತ್ರಗಳಿವೆ. ಇವುಗಳಲ್ಲಿ ಪತ್ರಿಚಿತ್ರದಲ್ಲಿಯೂ ನಮ್ಮ ಚಿತ್ರಗಾರರು ಒಂದೊಂದು ತಪ್ಪು ಮಾಡಿದ್ದಾರೆ. ಆ ತಪ್ಪನ್ನು ನೀವು ಕಂಡುಹಿಡಿಯಬಲ್ಲಿರಾ? ಸರಿಯಾದ ಉತ್ತರಕ್ಕೆ ಬರುವತಿಂಗಳು "ಚಂದಮಾಮ" ನೋಡಿರಿ.



# ಲಿಂಗಂ ಸ್ಟೋರ್ಸ್

ಬಳ್ಳಾರೀ ಪ್ರಾಂತದಲ್ಲಿ ಕೋಟಿಲಿಂಗನೆಂಬ ಒಬ್ಬ ತರುಣನಿದ್ದ. ಅವನು ಬೊಂಬಾಯಿಗೆ ಹೋಗಿ ಒಬ್ಬ ದೊಡ್ಡ ದರ್ಜಿಯ ಬಳಿಯಲ್ಲಿ ಕೆಲಸ ಮಾಡಿ ಸಮಸ್ತ ಜನರಿಗೆ ಬೇಕಾದ ಬಗೆಬಗೆಯ ಪೋಷಾಕುಗಳನ್ನು ಹೊಲಿಯಲು ಕಲಿತುಕೊಂಡು ಬಂದಿದ್ದ. ತನ್ನ ಊರಿನಲ್ಲಿರುವವರಿಗೆ ಆ ಮಾದರಿಯ ದುಸ್ತುಗಳನ್ನು ಕಡಮೆ ಕೂಲಿಗೆ ಹೊಲಿದು ಕೊಡುತ್ತಾ ಸಂಪಾದಿಸುತ್ತಿದ್ದ.

ಆದರಿಂದ ದಿನಕ್ಕೆ ಎರಡು ಮೂರು ರೂಪಾಯಿಯಾದರೂ ಸಿಕ್ಕುತ್ತಿತ್ತು. ಅವನ ಹೆಂಡತಿ ಬಹಳ ಜಾಗ್ರತೆಯುವಳು. ಬರುವ ಆದಾಯದಲ್ಲಿ ಅರ್ಧ ಖರ್ಚು ಮಾಡಿ ಅರ್ಧವನ್ನು ಉಳಿಸುತ್ತಿದ್ದಳು. ನಾಲ್ಕೈದು ವರ್ಷಗಳಲ್ಲಿ ಒಂದು ಸಾವಿರ ರೂಪಾಯಿ ಸೇರಿತು. ಅದರಿಂದ ಒಳ್ಳೆಯದೊಂದು ಆಸ್ತಿಯನ್ನು ಕೊಂಡುಕೊಂಡನು.

ಹೀಗೆ ಸುಖವಾಗಿರುವಾಗ, ಯುದ್ಧವು ಪ್ರಾರಂಭವಾಯಿತು. ಮಿಲಿಟರೀಯವರಿಗೆ ಡ್ರೆಸ್ಸುಗಳನ್ನು ಹೊಲಿದುಕೊಡಲು ಕಂಟ್ರಾಕ್ಟುಗಳು ಹೊರಟುವು. ಕಂಟ್ರಾಕ್ಟರುಗಳು ಊರಲ್ಲೆಲ್ಲಾ ಹರಡಿ, ಎಲ್ಲೆಲ್ಲಿದ್ದ ದರ್ಜಿಗಳನ್ನೆಲ್ಲಾ ಬೇಕಾದಷ್ಟು ಆಶೆ ಕಾಣಿಸಿ ಎಳೆದುಕೊಂಡು ಹೋದರು.

"ಈ ಊರಿನಲ್ಲಿ ಎಷ್ಟು ಕಾಲವಿದ್ದರೂ ಎರಡು ರೂಪಾಯಿ ಬರುವುದೇ ಹೆಚ್ಚು. ನನ್ನೊಂದಿಗೆ ಮದರಾಸಿಗೆ ಬಾ, ತಿಂಗಳಿಗೆ ಇನ್ನೂರು ನಿನ್ನ ಕೈಮೇಲಿದೆ" ಎಂದು ಒಮ್ಮೆ ಒಬ್ಬ ಕಂಟ್ರಾಕ್ಟರನು ಕೋಟಿಲಿಂಗನಿಗೆ ಹೇಳಿ ಒಪ್ಪಿಸಿ, ಅವನನ್ನು ಮದರಾಸಿಗೆ ಕರೆದುಕೊಂಡು ಹೋದನು.

ಮದರಾಸಿನಲ್ಲಿ ಮುನ್ನೂರು ಮಿಷನ್ನುಗಳ ಮಧ್ಯದಲ್ಲಿ ಕೋಟಿಲಿಂಗನು ರಾತ್ರೀ ಹಗಲೂ ಕೆಲಸ ಮಾಡಿದನು. ಶೂಟೂ ಕೋಟೂ ಹೊಲಿದು ಹಾಕಿದನು. ಆಗ ಅವನ ಮನಸ್ಸಿನಲ್ಲಿ—"ಇಷ್ಟು ಶ್ರಮ ನಾವು ಪಡುತ್ತಿದ್ದರೆ, ಲಾಭವನ್ನೆಲ್ಲಾ ಈ ಕಂಟ್ರಾಕ್ಟರುಗಳು ಹೊಡೆದು ಹಾಕುತ್ತಾರಲ್ಲ! ನಾವೇ ಒಂದು ಸಣ್ಣ ಕಂಟ್ರಾಕ್ಟು ತೆಗೆದುಕೊಂಡರೆ ಲಾಭವು ನಮಗೇ ದಕ್ಕುವುದು!" ಎಂದು ನೆನೆದನು.

ವಿ. ತಿಪ್ಪಯ್ಯ, ಹೊಸಪೇಟೆ



ಈ ಆಲೋಚನೆಯನ್ನು ಕೂಡಲೇ ಅಮಲಿಗೂ ತಂದನು. ತಾನೇ ಒಂದು ಸಣ್ಣ ಕಂಟ್ರಾಕ್ಟ್‌ದಾರನಾದನು. ಕಂಟ್ರಾಕ್ಟರನಾಗ ಬೇಕಾದರೆ ತುಂಬಾ ಬಟ್ಟೆಗಳನ್ನು ಕೊಂಡುಕೊಳ್ಳಲು ದುಡ್ಡು ಬೇಡವೇ? ಕೋಟಿಲಿಂಗನು ಊರಿನಲ್ಲಿರುವ ತನ್ನ ಭೂಮಿಯನ್ನು ಮಾರಿ ಹಣ ತಂದನು. ಮಾರುವಾಗ ಹೆಂಡತಿ ಮಾರಬಾರದೆಂದು ಆತಂಕಪಡಿಸಿದರೂ, ಈ ಕಂಟ್ರಾಕ್ಟು ಕೆಲಸದಲ್ಲಿ ಐದು ಸಾವಿರ ಲಾಭ ಬರುತ್ತಲೇ, ಅಷ್ಟನ್ನೂ ಹಾಕಿ ಭೂಮಿಯನ್ನು ಕೊಂಡುಕೊಳ್ಳುವುದಾಗಿ ಹೇಳಿದ ಮೇಲೆ ಅವಳು ಒಪ್ಪಿದಳು.

ಹಾಗೆಯೇ ಮೊದಲು ಐದು ಸಾವಿರಕ್ಕೆ ಮೇಲೆಯೇ ಲಾಭ ಬಂತು. ಆದರೆ ಅವನು ಭೂಮಿ ಕೊಂಡುಕೊಳ್ಳಲೇ ಇಲ್ಲ. ಜೂಜಿನಲ್ಲಿ ಗೆದ್ದವನು ಆ ಹಣದಲ್ಲಿ ತೃಪ್ತಿಪಟ್ಟು ಬಿಡುತ್ತಾನೆಯೇ? ಮತ್ತೂ ಮತ್ತೂ ಜೂಜಿಗೇ ಹೋಗುವಂತೆ, ಕೋಟಿಲಿಂಗನು ಕಟ್ರಾಕ್ಟಿನ ಮೇಲೆ ಕಂಟ್ರಾಕ್ಟ್ ತೆಗೆದುಕೊಳ್ಳುತ್ತಾ ಕೋಟೀಶ್ವರನಾಗಬೇಕೆಂದು ಭಾವಿಸಿದನು. ಆದರೆ ದುರದೃಷ್ಟವಶಾತ್ತಾಗಿ ಅಷ್ಟರಲ್ಲಿಯೇ ಯುದ್ಧವು ನಿಂತು, ಅದರೊಂದಿಗೆ ಬಟ್ಟೆಯ ಕಂಟ್ರಾಕ್ಟೂ ನಿಂತುಹೋಯಿತು.

ಆದರೇನು? ಕೈಯಲ್ಲಿ ಹಣವು ಆಡುತ್ತಿದ್ದುದರಿಂದ, ಅದನ್ನು ವ್ಯಾಪಾರಕ್ಕೆ ಹಾಕಿ ಲಾಭ ಪಡೆಯೋಣವೆಂಬ ಚಪಲವು ಕೋಟಿಲಿಂಗನಿಗೆ ಬಂತು. ಯೋಚನೆ ಮಾಡಿದಾಗ ರೆಡಿಮೇಡ್ ಬಟ್ಟೆಯ ಅಂಗಡಿ ಇಟ್ಟರೆ ಒಳ್ಳೆಯದೆಂದು ತೋರಿದ್ದೇ ತಡ, ಟ್ರಿಪ್ಲಿಕೇನ್ ಹೈರೋಡಿನಲ್ಲಿ, ಒಂದು ದೊಡ್ಡ ಕಟ್ಟಡವನ್ನು ಬಾಡಿಗೆಗೆ ತೆಗೆದುಕೊಂಡು "ಲಿಂಗಂ ಸ್ಟೋರ್ಸ್" ಎಂಬ ಬೋರ್ಡನ್ನು ತೂಗಾಡಿಸಿ, ಒಳ್ಳೇ ಜೋರಾಗಿ ವ್ಯಾಪಾರಕ್ಕೆ ತೊಡಗಿದನು.

ಆ ಅಂಗಡಿಯ ಸಮೀಪದಲ್ಲಿಯೇ ಇನ್ನೊಂದು ಮನೆಯನ್ನು ತೆಗೆದುಕೊಂಡು, ಅಲ್ಲಿ ಮಿಷನ್ನುಗಳನ್ನು ಇಡಿಸಿ, ಬಗೆಬಗೆಯ ದುಸ್ತುಗಳನ್ನು ತಯಾರು ಮಾಡಿ ಕನ್ನಡಿ ಬೀರೋಗಳಲ್ಲಿಟ್ಟು ಮಾರತೊಡಗಿದನು.

ವ್ಯಾಪಾರ ಚೆನ್ನಾಗಿಯೇ ಸಾಗಿತು. ಮತ್ತೆ ಸ್ವಲ್ಪ ದಿವಸದಲ್ಲಿಯೇ ಬಟ್ಟೆಗಳ ಕ್ರಯ ಅರ್ಧಕ್ಕರ್ಧ ಇಳಿದುಹೋಯಿತು. ಕೋಟಿಲಿಂಗನು ಹೆಚ್ಚು ಬೆಲೆ ಕೊಟ್ಟು ಬಟ್ಟೆ ತೆಗೆದುಕೊಂಡಿದ್ದ.









ಹೊಲಿಗೆ ಮಜೂರಿ, ಅಂಗಡಿ ಬಾಡಿಗೆ, ತನ್ನ ಲಾಭ ಎಲ್ಲವನ್ನೂ ಸೇರಿಸಿ, ಚೀಟಿಗಳಲ್ಲಿ ದರ ವನ್ನು ಬರೆದು, ದುಸ್ತುಗಳಲ್ಲಿ ತೂಗಾಡಿಸಿ ಇಟ್ಟನು. ಬಂದ ಗಿರಾಕಿಗಳು ಅವನ ದರ ವನ್ನು ನೋಡಿ "ಇಷ್ಟು ಬೆಲೆಗೆ ಇಂಥಾದ್ದು ಎರಡು ಬರುತ್ತದಲ್ಲಾ" ಎಂದು ಕೊಂಡು ಹೊರಟು ಹೋಗುತ್ತಿದ್ದರು.

ಅವನಿಗೆ ವ್ಯಾಪಾರವಾಗುವ ದಾರಿ ಕಾಣ ಲಿಲ್ಲ. ಕೆಲಸದವರ ಸಂಬಳ ಮುಂತಾದುವು ಗಳನ್ನು ಸಾಲ ಮಾಡಿ ಕೊಡಬೇಕಾಗಿ ಬಂತು. "ನಷ್ಟವಿಲ್ಲದಂತೆ ಹೇಗೆ ಗಡಿ ದಾಟುವುದೋ?" ಎಂದು ಯೋಚಿಸ ತೊಡಗಿದನು. ಆಗ ಅಪೂರ್ವವಾದೊಂದು ಯೋಚನೆ ಅವನ ಚುರುಕು ಬುದ್ಧಿಯಲ್ಲಿ ಹೊಳೆಯಿತು.

ಸ್ವರಾಜ್ಯ ಬರುವುದಕ್ಕೆ ಮೊದಲು ಮದ ರಾಸಿನಲ್ಲಿ ಗುಮಾಸ್ತರು ಕೂಡಾ ಸೂಟು ಹಾಕಿಕೊಳ್ಳುತ್ತಿದ್ದರು. ಸ್ವರಾಜ್ಯವು ಬಂದ ಮೇಲೆ ದೊಡ್ಡ ದೊಡ್ಡ ಉದ್ಯೋಗಿಗಳು ಕೂಡಾ ಸೂಟು ಹಾಕುವುದನ್ನು ಬಿಟ್ಟದ್ದರು. ಆದುದ ರಿಂದ 'ಲಿಂಗು ಸ್ಟೋರ್ಸ್' ನಲ್ಲಿ ಕೊಂಡು ಕೊಳ್ಳುವವರಿಲ್ಲದೆ ಹೆಚ್ಚಾಗಿ ಸೂಟುಗಳೇ ಕಾಣುತ್ತಿದ್ದುವು. ಇದನ್ನು ಯೋಚಿಸಿ ಕೋಟಿ ಲಿಂಗನು ಏನು ಯುಕ್ತಿ ಮಾಡಿದನೆಂದರೆ:—

ಏಳೇಳು ಸೂಟುಗಳಂತೆ ಒಂದೊಂದು ಕಟ್ಟು ಕಟ್ಟಿ, ಬೆಂಗಳೂರು, ಮಂಗಳೂರು, ಕಲ್ಕತ್ತಾ, ಕಾಕಿನಾಡ ಮೊದಲಾದ ಪಟ್ಟಣ ಗಳಲ್ಲಿರುವ, ದೊಡ್ಡ ದೊಡ್ಡ ಉದ್ಯೋಗಸ್ಥರು ಗಳಿಗೆ ಕಳುಹಿಸಿಬಿಡುವುದು. ಒಳಗಿನ ಬಿಲ್ಲಿ ನಲ್ಲಿ ಆರು ಸೂಟುಗಳಿಗೆ ಮಾತ್ರ ದರ ಬರೆ ದಿಡುವುದು. ಆಗ ಪಾರ್ಸೆಲ್ಲನ್ನು ಪಡೆದು ಕೊಂಡವನು ಅದನ್ನು ಬಿಡಿಸಿ ನೋಡಿ, ಬಿಲ್ಲಿ ನಲ್ಲಿ ಆರು ಸೂಟುಗಳಿಗೇ ಬೆಲೆಯಿರುವುದ ರಿಂದ, ಒಂದು ಸೂಟು ಉಚಿತವಾಗಿ ತನಗೆ ದೊರಕಿತೆಂದು ಸಂತೋಷಿಸುತ್ತಾನೆ. ಆ ಸಂತೋಷದಲ್ಲಿ ಸೂಟುಗಳ ದರ ಹೆಚ್ಚಾಗಿರು ವುದನ್ನು ಗಮನಿಸದೆ, ಬಿಲ್ಲಿನಪ್ರಕಾರ ಹಣ ವನ್ನು ಮಣಿಯಾರ್ಡರು ಮಾಡಿಬಿಡುತ್ತಾನೆ. ಇದೇ ಅವನಿಗೆ ತೋರಿದ ಅಪೂರ್ವವಾದ ಉಪಾಯ!

ಈ ಯೋಚನೆಯನ್ನು ಕೇಳಿ ಅವನ ಗುಮಾಸ್ತನು "ಚೆನ್ನಾಗಿದೆ, ಹೀಗೆ ಮಾಡಿದರೆ ಖಂಡಿತ ವಿಜಯವಾಗುವುದು. ಅವುಗಳಿಗೆ



ಹಳೆಯ ಚೀಟಿಯನ್ನು ಬಸಾಡಿ ಹೊಸ ಚೀಟಿಯನ್ನು ತಗಲಿಸುವಾ" ಎಂದನು.

ಮೊದಲು ಕೋಟಿಲಿಂಗನು ಒಂದೇ ಒಂದು ಪಾರ್ಸೆಲನ್ನು ಕಳಿಸಿದನು. ಬೆಂಗಳೂರಿನಿಂದ ಯಾರೋ ಒಬ್ಬ ಕಾಲೇಜು ಹುಡುಗನು ಬಂದಿದ್ದಾಗ, ಅವನೊಡನೆ ವಿಚಾರಿಸಿ ಅಲ್ಲಿಯ ಕಾಲೇಜು ಲೆಕ್ಚರರುಗಳ ವಿಳಾಸಗಳನ್ನೆಲ್ಲಾ ತಿಳಿದುಕೊಂಡಿದ್ದ. ಅವುಗಳಲ್ಲೊಂದು ಒ.ಟಿ.ವಿ. ರಾವ್, ಎಂ.ಎ. ಇವರ ಹೆಸರು ಕೇಳುತ್ತಲೇ ಸೂಟು ಧರಿಸುವವರಂತೆಯೇ ತೋರಿದ್ದರಿಂದ ಕೋಟಿಲಿಂಗನು ಮೊದಲನೇ ಪಾರ್ಸೆಲನ್ನು ಅವರಿಗೇ ಕಳಿಸಿದನು.

ಮೂರು ದಿನಗಳು ಕಳೆದ ಮೇಲೆ ಕೋಟಿಲಿಂಗನು ಬೆಂಗಳೂರಿನಿಂದ ಬರುವ ಮಣಿಯಾರ್ಡರಿಗಾಗಿ ಇದಿರು ನೋಡುತ್ತಿದ್ದ. ಆ ದಿನ ಪೋಸ್ಟ್ ಜವಾನನು ತನ್ನ ಸ್ಟೋರ್ಸ್ ಮೆಟ್ಟಿಲು ಹತ್ತುವುದನ್ನು ನೋಡಿ, ಕೋಟಿಲಿಂಗಂ ಬ್ರಹ್ಮಾನಂದದಿಂದ "ಮಣಿಯಾರ್ಡರಾ? ಹೀಗೆ ಕೊಡು" ಎಂದ. "ಇಲ್ಲವಯ್ಯಾ, ಪಾರ್ಸೆಲ್ ಬಂದಿದೆ" ಎಂದ ಜವಾನನ ಉತ್ತರ ಕೇಳಿ ಲಿಂಗಂ ಸ್ತಂಭಿಸಿದ.

"ಪ್ರೊಫೆಸರರು ಪಾರ್ಸಲನ್ನು ತಿರುಗಿಸಿದ್ದಾರೆ!" ಎಂದನು ಗುಮಾಸ್ತಾ. ಪಾರ್ಸೆಲನ್ನು ಬಿಡಿಸಿ ನೋಡಿದಾಗ ಅದೇ ಪಾರ್ಸಲಾಗಿತ್ತು. ಬಿಡಿಸಿ ಮತ್ತೆ ಪ್ಯಾಕು ಮಾಡಿದಂತಿತ್ತು. ಅಲ್ಲದೆ ಆರು ಸೂಟುಗಳೇ ತಿರುಗಿ ಬಂದಿದ್ದುವು. ಒಳಗೊಂದು ಸಣ್ಣ ಕಾಗದವೂ ಇತ್ತು. ಅದರಲ್ಲಿ:– "ಲಿಂಗಂ ಸ್ಟೋರ್ಸ್ ಪ್ರೊಪ್ರೈಟರ್ ರವರಿಗೆ, ಅಯ್ಯಾ, ತಾವು ಕಳಿಸಿದ ಆರು ಸೂಟುಗಳನ್ನೂ ಅದರ ಬಿಲ್ಲನ್ನೂ ವಾಪಸು ಕಳಿಸಿದ್ದೇನೆ. ನನಗೆ ಸೂಟು ಹಾಕಿಕೊಳ್ಳುವ ಅಭ್ಯಾಸವೇ ಇಲ್ಲ. ಒ.ಟಿ.ವಿ. ರಾವ್." ಎಂದಿತ್ತು.

ಇದನ್ನೋದುತ್ತಲೇ ಕೋಟಿಲಿಂಗನಿಗೆ ಮೈ ಉರಿಯಿತು. "ಒಂದು ಸೂಟೂ ಹೊಡೆದು ಹಾಕಿದ! ಅಭ್ಯಾಸವಿಲ್ಲವಂತೆ! ಮತ್ತೆ ಆ ಹೊಡೆದು ಹಾಕಿದ ಸೂಟು ಏನು ಮಾಡುತ್ತಾನೊ?" ಎಂದನು ಕೋಪದಿಂದ.

ಅದಕ್ಕೆ ಗುಮಾಸ್ತನು—"ಅವರ ಮಗನಿಗೆ ಉಪಯೋಗಿಸಲು ಕೊಟ್ಟಿದ್ದಾರು." ಎಂದನು-

ಪಾಪ! ಅದನ್ನು ಕೇಳುತ್ತಾ ಪಾರ್ಸಲನ್ನು ನೋಡುತ್ತಾ ಕೋಟಿಲಿಂಗನಿಗಾದ ಸಂಕಟವು ಎಷ್ಟೆಂದು ಹೇಳೋಣ!



# ರತ್ನ ಕಿರೀಟ

ಎರಡು ಸಾವಿರ ವರ್ಷಗಳ ಹಿಂದೆ, ಬ್ರಹ್ಮಪುತ್ರಾ ನದೀ ಪ್ರಾಂತದಲ್ಲಿ ಭಲ್ಲಾಣವೆಂಬ ರಾಜ್ಯವು ಬಹಳ ಪ್ರಸಿದ್ಧವಾಗಿತ್ತು. ಪ್ರಮೋದನೆಂಬ ದೊರೆ ಅದನ್ನು ಪಾಲಿಸುತ್ತಿದ್ದನು. ಪ್ರಮೋದನು ಧೀರ-ವೀರ ಪರಾಕ್ರಮಗಳಲ್ಲಿ ತುಂಬಾ ಪ್ರಖ್ಯಾತನಾಗಿದ್ದನು. ಅವನ ಪಾಲನೆಯಲ್ಲಿ ಪ್ರಜೆಗಳೆಲ್ಲಾ ಬಹಳ ಸುಖವಾಗಿದ್ದರು.

ಯಾವ ಕೊರತೆಯೂ ಇಲ್ಲದೆ ತೃಪ್ತರಾಗಿರುವ ಪ್ರಜೆಗಳನ್ನೆಲ್ಲಾ ಒಂದೇ ಒಂದು ಚಿಂತೆ ಮಾತ್ರ ಬಾಧಿಸುತ್ತಿತ್ತು. ಪ್ರಮೋದನು ಅವಿವಾಹಿತನಾಗಿದ್ದನು. ಏನು ಕಾರಣವೋ ಯಾರಿಗೂ ತಿಳಿಯದು; ಪ್ರಮೋದನು ತನ್ನ ಮದುವೆಗೆ ಮಾತ್ರ ಒಡಂಬಡಲೇ ಇಲ್ಲ. ಇದೇ ಪ್ರಜೆಗಳ ಚಿಂತೆಗೆ ಕಾರಣ.

ಪ್ರಜೆಗಳಲ್ಲಿ ಕೆಲವು ಮುಖ್ಯಸ್ಥರು ಸುಮ್ಮನಿರಲಿಲ್ಲ. ಹಿರಿಯರು ಹತ್ತು ಮಂದಿ ಕೂಡಿ, ಚರ್ಚೆ ಮಾಡಿದರು. ಬಳಿಕ ಹತ್ತು ಯೋಜನ ದೂರದಲ್ಲಿರುವ ಬೆಟ್ಟದ ಮೇಲೆ ತಪಸ್ಸು ಮಾಡುತ್ತಿರುವ ಒಬ್ಬ ಮಹರ್ಷಿಯ ಬಳಿಗೆ ಹೋದರು. ತಮ್ಮ ಚಿಂತೆಯನ್ನು ಹೇಳಿಕೊಂಡರು. ತ್ರಿಕಾಲವೇದಿಯಾದ ಆ ಮಹಾನುಭಾವನು ಒಂದು ಹಣ್ಣನ್ನು ಮಂತ್ರಿಸಿ ಅವರಿಗೆ ಕೊಟ್ಟು, "ಈ ಹಣ್ಣು ನಿಮ್ಮ ರಾಜನ ಹೊಟ್ಟೆಯೊಳಗೆ ಹೋಗಲಿ. ಕಲ್ಯಾಣವಾಗುವುದು." ಎಂದು ಹೇಳಿ ಕಳುಹಿಸಿಕೊಟ್ಟನು.

ಅವರು ಉತ್ಸಾಹದಿಂದ ಹಿಂದಿರುಗಿದರು. ಪ್ರಮೋದನು ಫಲಹಾರ ಮಾಡುವಾಗ ಆ ಹಣ್ಣನ್ನು ಕೂಡಾ ಅದರೊಂದಿಗೆ ಸೇರಿಸಿಬಿಟ್ಟರು. ರಾಜನೂ ತಿಂದನು.

ಆ ದಿನ ರಾತ್ರಿ ಊರೆಲ್ಲಾ ನಿಶ್ಶಬ್ದವಾಗಿತ್ತು. ನಿದ್ರೆ ಮಾಡುತ್ತಿದ್ದ ಪ್ರಮೋದನ ಕಿವಿಗಳಿಗೆ ತುಂಬಾ ಇಂಪಾದ ಮಧುರ ಗಾನವೊಂದು ಕೇಳಿಬರತೊಡಗಿತು. ಅರಸನು ಕುತೂಹಲದಿಂದ ಎದ್ದನು. ಯಾರಿಗೂ ಹೇಳದೆ



ತಾನೊಬ್ಬನೇ ಹೊರಟು, ಕೋಟೆಯಿಂದಿಳಿದು, ಆ ಗಾಯನವು ಬರುವ ಕಡೆಗೆ ನಡೆದನು.

ಅಲ್ಲೊಂದು ರಮಣೀಯವಾದ ತೋಟ. ಆದರ ನಡುವೆ ಸುಂದರವಾದೊಂದು ಕೊಳ. ಆ ಕೊಳದ ದಂಡೆಯಲ್ಲಿ ಸುಂದರಿಯಾದ ಗಂಧರ್ವ ಕನ್ಯೆಯೊಬ್ಬಳು ಕುಳಿತುಕೊಂಡು ವೀಣೆ ಬಾರಿಸುತ್ತಿದ್ದಾಳೆ. ಅವಳ ಸುತ್ತೂ ಹತ್ತುಮಂದಿ ಪರಿಚಾರಿಕೆಯರೂ ಇದ್ದರು.

ಆ ಗಂಧರ್ವ ಕನ್ಯೆಯನ್ನು ನೋಡುತ್ತಲೇ ಪ್ರಮೋದನು ಹೇಗಾದರೂ ಇವಳನ್ನೇ ವಿವಾಹ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿ ಕೊಂಡನು. ಆ ಹಣ್ಣಿನ ಮಹಿಮೆ ಅಂತ ಹದು. ಅದನ್ನು ತಿಂದ ದಿನ ಮೊತ್ತ ಮೊದಲು ಯಾವ ಕನ್ಯೆ ಕಣ್ಣಿಗೆ ಬೀಳುವಳೋ, ಅವಳನ್ನೆ ಮದುವೆಯಾಗಬೇಕೆಂಬ ಇಚ್ಛೆಯುಂಟಾಗು ತ್ತದೆ. ಗಂಧರ್ವ ಕನ್ಯೆಯೊಂದಿಗೆ ಮಾನವ ರಾಯನ ಮದುವೆಯಾಗುವುದರಿಂದ, ಏನಾ ಗುವುದೋ ಎಂದು ಯಾರೆಷ್ಟು ಹೇಳಿದರೂ ಪ್ರಮೋದನು ಕೇಳಲಿಲ್ಲ. ಕಡೆಗೆ ಆ ಗಂಧರ್ವ ಕನ್ಯೆಯೊಂದಿಗೇ ಪ್ರಮೋದನ ಮದುವೆ ಅತಿ ವೈಭವದಿಂದ ಜರುಗಿಹೋಯಿತು. ಎಲ್ಲರೂ 'ಆ ಋಷಿಯ ಕೃಪೆ' ಎಂದುಕೊಂಡರು.

ಮರು ವರುಷದಲ್ಲಿಯೇ ಅವರಿಗೊಬ್ಬ ಕುಮಾರನು ಜನಿಸಿದನು. ಆ ಮಗುವಿಗೆ 'ಮಹೀಪಾಲ' ನೆಂದು ನಾಮಕರಣ ಮಾಡಿ ದರು. ಬಹಳ ಮುದ್ದಿನಿಂದ ಆ ಮಗುವನ್ನು ಬೆಳೆಸುತ್ತಿದ್ದರು. ಬಹಳ ಸಂತೋಷದಿಂದ ಕಾಲವು ಹೋಗುತ್ತಿತ್ತು.

ಹೀಗಿರಲು ಒಂದು ದಿನ ಪ್ರಮೋದನು ಮಾಮೂಲಿನಂತೆ ಬೇಟೆಗೆ ಹೋದನು. ಆ ದಿನ ವಿಶೇಷವಾದ ಮೃಗಗಳೊಂದೂ ಅವ ನಿಗೆ ದೊರಕಲಿಲ್ಲ. ಆದುದರಿಂದ ಕಾಡಿನೊಳ ಗೆಲ್ಲಾ ಬಹು ದೂರದವರೆಗೆ ಹುಡುಕುತ್ತಾ ಹೋದನು. ಮಿತಿ ಮೀರಿದ ನಡಿಗೆಯಿಂದ ತುಂಬಾ ಬಳಲಿದನು. ದಾಹವಾಯಿತು, ನೀರಿಗಾಗಿ ಅತ್ತಿತ್ತ ನೋಡಿದನು. ಸ್ವಲ್ಪದೂರ ದಲ್ಲಿ ಒಂದು ಕುಟೀರವು ತೋರಿತು. ಅದು ಕಾಡುಗಳಅರಸನಾದ ಕಿರಾತ ರಾಜನ ನಿವಾಸ. ಅಂದ ಚಂದವಾಗಿ ತೋರುವ ಆ ಕುಟೀರ ದಲ್ಲಿ ಬಲು ಚಲುವೆಯಾದ ಹುಡುಗಿ ಯೊಬ್ಬಳು ಇದ್ದಳು. ಅವಳು ಕಿರಾತ ರಾಜನ ಮಗಳು ಮಂದಾಕಿನಿ.

ಪ್ರಮೋದನಿಗೆ ನೀರನ್ನು ತಂದುಕೊಟ್ಟ ಆ ಸುಂದರಿ ಮಂದಾಕಿನಿಯನ್ನು ನೋಡುತ್ತಲೇ ಇವಳನ್ನೂ ಮದುವೆ ಮಾಡಿಕೊಳ್ಳಬೇಕೆಂದು ಅರಸನಿಗೆ ಬುದ್ಧಿ ಹುಟ್ಟಿಬಿಟ್ಟಿತು. ಕೇಳುವ ದಾರು? ಹೇಳುವುದಾರು? ಪ್ರಮೋದನು ಕೂಡಲೇ ಕಿರಾತ ರಾಜನೊಡನೆ ಪ್ರಸ್ತಾವಿಸಿದನು. ಅಲ್ಲಿಯೇ ಅವಳನ್ನು ವರಿಸಿಕೊಂಡೂ ಬಿಟ್ಟನು. ಬಳಿಕ ಅವಳೊಂದಿಗೆ ಹೊರಟು ತನ್ನ ರಾಜಧಾನಿಯನ್ನು ಸೇರಿದನು.

ಮಂದಾಕಿನಿ ಬಹಳ ಜಾಗರೂಕತೆಯಿಂದ ನಡೆಯುತ್ತಾ ಎಲ್ಲರಿಂದಲೂ 'ಒಳ್ಳೆಯ ರಾಣಿ' ಎನಿಸಿದಳು. ಅವಳನ್ನು ಕುರಿತು ಪ್ರಜೆಗಳು "ಮನುಷ್ಯರಿಗೆ ಗುಣವೇ ಪ್ರಧಾನವಲ್ಲದೆ ಕುಲವಲ್ಲ" ಎಂದು ತೃಪ್ತಿಪಟ್ಟರು. ತನ್ನ ದ್ವಿತೀಯ ವಿವಾಹದಿಂದ ಪ್ರಜೆಗಳು ಸಂತೃಪ್ತರಾಗಿಯೇ ಇರುವರೆಂದು ರಾಜನಿಗೂ ಸಮಾಧಾನ. ಹೀಗೆಯೇ ಸುಖವಾಗಿ ಕಾಲಕಳೆಯುತ್ತಿತ್ತು. ಕ್ರಮೇಣ ಚಿಕ್ಕರಾಣಿ ಮಂದಾಕಿನಿಗೂ ಒಬ್ಬ ಮಗನು ಹುಟ್ಟಿದನು.

ಮಗನು ಹುಟ್ಟಿದ ಮೇಲೆ ಮಾತ್ರ ಮಂದಾಕಿನಿ ಸ್ವಲ್ಪ ಸ್ವಲ್ಪವಾಗಿ ಬದಲಾಯಿಸುತ್ತಾ ಬಂದಳು. ಅಸೂಯೆ ತಲೆಹಾಕಿತು. ಗಂಧರ್ವ ಕಾಂತೆಯನ್ನು ಗೌರವಿಸುವುದನ್ನು ಬಿಟ್ಟಳು. ಹಿರಿಯ ಕುಮಾರ ಮಹೀಪಾಲನು ಕೂಡಾ ಚಿಕ್ಕರಾಣಿಯ ಕೈಯಲ್ಲಿ ನಾನಾ ಬಾಧೆಗಳನ್ನು ಪಡಲಾರಂಭಿಸಿದನು. ಅರಸನ ಪ್ರೀತಿಯ ಚಿಕ್ಕರಾಣಿ ಮಂದಾಕಿನಿಯ, ಈ ಬಗೆಯ ಬದ




ಲಾವಣೆಯಿಂದ, ಇನ್ನೊಂದು ಮುಖ್ಯವಾದ ಘಟನೆಯಾಯಿತು. ಅದೇನೆಂದರೆ, ಗಂಧರ್ವ ರಾಣಿಯ ಹೃದಯಕ್ಕೆ ತುಂಬಾ ನೋವಾಯಿತು. "ಈಗ ಚಿಕ್ಕರಾಣಿಯ ಅಧಿಕಾರ ನಡೆಯುತ್ತಿದೆ. ರಾಜನು ಅವಳ ಇಷ್ಟಕ್ಕೆ ಇದಿರಾಡುವುದಿಲ್ಲ. ನನ್ನನ್ನೂ ಲಕ್ಷಿಸುವುದಿಲ್ಲ. ನನ್ನ ಮಾತಿಗೆ ಬೆಲೆಯಿಲ್ಲದಾಗ, ನಾನೇಕೆ ಇಲ್ಲಿ ಬಲವಂತವಾಗಿ ಬಿದ್ದು ಬಾಧೆ ಪಡಬೇಕು? ನನ್ನಿಂದ ಅವಳಿಗೇಕೆ ಬಾಧೆ? ಈಗ ಹೇಗಾದರೂ ಮುಂದೆ ಪಟ್ಟ ಕಟ್ಟಿಸಿಕೊಳ್ಳ ತಕ್ಕವನು ನನ್ನ ಕುಮಾರ ಮಹೀಪಾಲನೇ. ಇದು ಅರಸನಿಗೆ ಗೊತ್ತಿಲ್ಲವೋ ಪ್ರಜೆಗಳಿಗೆ ಗೊತ್ತಿಲ್ಲವೋ?" ಎಂದು ಯೋಚಿಸಿಕೊಂಡು, ಗಂಧರ್ವ ರಾಣಿ ಒಂದು ದಿನ ರಾತ್ರಿ ಯಾರಿಗೂ ತಿಳಿಯದಂತೆ ಅದೃಶ್ಯಳಾದಳು.



ಅದಕ್ಕಾಗಿ ರಾಜನೇನೂ ಹೆಚ್ಚು ಚಿಂತಿಸಲಿಲ್ಲ. ಸವತಿ ಫಕ್ಕನೆ ಅದೃಶ್ಯಳಾಗುತ್ತಲೇ ಮಂದಾಕಿನಿಗೆ ಒಂದು ಬದಿಯಿಂದ ಸಂತೋಷವೂ ಇನ್ನೊಂದು ಬಡಿಯಿಂದ ವಿಚಾರವೂ ಉಂಟಾಯಿತು. ಇನ್ನು ಇಷ್ಟ ಬಂದಂತೆ ಮಹೀಪಾಲನನ್ನು ಬಾಧಿಸಬಹುದೆಂಬ ತೃಪ್ತಿ. ಆದರೆ ಆ ಮಾಯಾವಿನಿ ಯಾವ ಉದ್ದೇಶದಿಂದ ಎಲ್ಲಿಗೆ ಹೋಗಿದ್ದಾಳೋ? ಎಂದು, ಮಂದಾಕಿನಿಗೆ ಅನುಮಾನವೂ ಭಯವೂ ಒಳಗೊಳಗೇ ಇತ್ತು. ಏನಾದರೂ ತನ್ನ ಮುದ್ದು ಕುವರನಾದ ಭಾನುತೇಜನಿಗೇ ಪಟ್ಟಕಟ್ಟಿಸಿಬಿಡಬೇಕೆಂಬ ಹಟವು ಅವಳ ಮನಸ್ಸಿನೊಳಗೇ ಅಭಿವೃದ್ಧಿ ಹೊಂದುತ್ತಿತ್ತು. ದಿನ ಹೋದಂತೆ ಸವತಿಯ ಮಗನ ಮೇಲೆ ಅವಳ ಹಗೆ ಹೆಚ್ಚಾಗುತ್ತಾ ಬಂದಿತು.



ತನ್ನ ಮಗನ ಮೇಲಿನ ಮಮತೆ ಅವಳಿಗೆ ಎಷ್ಟು ಹೆಚ್ಚಾಯಿತೆಂದರೆ, 'ಮಹೀಪಾಲನನ್ನು ಹತಗೊಳಿಸಿದರೇನೇ, ತನ್ನ ಮಗನಿಗೆ ಸಿಂಹಾಸನ ದೊರೆಯುವುದಷ್ಟೇ' ಎಂಬ ನಿಶ್ಚಯಕ್ಕೆ ಬಂದಳು. ಎಂತಹ ಕ್ರೂರ ಕಾರ್ಯವನ್ನಾದರೂ ಮಾಡಿಬಿಡುವಷ್ಟು ಧೈರ್ಯವು ಅವಳಿಗೆ ಬಂತು. ಹೃದಯದಲ್ಲಿ ವಿಷಬೀಜವು ಬಿದ್ದ ಮೇಲೆ ಕೇಳುವುದೇನು? ಅದು ಮೊಳಕೆಯೊಡೆದು ಗಿಡವಾಗಿ ಬೆಳೆಯುತ್ತಲೇ ಇತ್ತು. ರಾತ್ರಿಯೂ, ಹಗಲೂ ನಿದ್ರಾಹಾರ ಕೂಡಾ ಬಿಟ್ಟು, ಮಂದಾಕಿನಿ ಈ ವಿಷಯವನ್ನು ಕುರಿತೇ ತೀವ್ರವಾಗಿ ಯೋಚನೆ ಮಾಡುತ್ತಿದ್ದಳು. ಅವಳ ಯೋಚನೆ ಫಲಿಸುವ ಕಾಲವೂ ಬೇಗನೇ ಬಂದಿತು.

ಇದ್ದಕ್ಕಿದ್ದಂತೆ ಭಲ್ಲಾಣ ರಾಜ್ಯದೊಳಗೆಲ್ಲಾ ಒಂದು ವಿಚಿತ್ರವಾರ್ತೆ ಹಬ್ಬ ತೊಡಗಿತು.— "ಗಂಧರ್ವರು ದೇವಗಣಕ್ಕೆ ಸೇರಿದವರು. ಅವರ ಕನ್ಯೆಯನ್ನು ಮಾನವನು ಮದುವೆಯಾಗುವುದೆಂದರೆ ತುಂಬಾ ವಿಪರೀತವೇ. ಶಾಸ್ತ್ರಕ್ಕೂ ವಿರುದ್ಧ. ಪ್ರಮೋದನು ಈ ಬಗೆಯ ಶಾಸ್ತ್ರ ವಿರುದ್ಧವಾದ ಕೆಲಸ ಮಾಡಿಬಿಟ್ಟಿದ್ದಾನೆ. ಗಂಧರ್ವ ಕನ್ಯೆಯನ್ನು ವರಿಸಿದ್ದಾನೆ. ಅದರ ಮೇಲೆ ಮಗನನ್ನೂ ಪಡೆದಿದ್ದಾನೆ! ಈ ಪರಿಸ್ಥಿತಿಯಲ್ಲಿ ದೇವತೆಗಳಿಗೆ ಕೋಪ ಬಾರದೇ ಇದ್ದೀತೆ? ಆದುದರಿಂದಲೇ ಈಗ್ಗೆ ಎರಡು ವರ್ಷಗಳಿಂದಲೂ ಈ ರಾಜ್ಯದಲ್ಲಿ ಮಳೆ ಬೀಳಲಿಲ್ಲ. ಬೆಳೆ ನಾಶವಾಯಿತು.



"ಇದಕ್ಕೆ ಪ್ರಮೋದನೇ ಕಾರಣ!" ಎಂದು ದೇಶದೊಳಗೆಲ್ಲಾ ಜನರು ಮಾತಾಡಿಕೊಳ್ಳು ತ್ತಿದ್ದರು. ವಾರ್ತೆ ಒಂದೇ ಕಡೆ ನಿಲ್ಲುವುದೆ?

ಅದು ಕಿವಿಯಿಂದ ಕಿವಿಗೆ ಸಾಗಿ ರಾಜಾ ಪ್ರಮೋದನ ಕಿವಿಗೂ ಸೇರಿತು. ಅವನು ವ್ಯಸನದಿಂದ ಯೋಚನೆಗೆ ಬಿದ್ದನು.—"ಇದ ರಲ್ಲಿ ನನ್ನ ತಪ್ಪೇನಿದೆ? ಲೋಕದ ಕ್ಷೇಮ ವನ್ನು ಕೋರುವ ಒಬ್ಬ ಮಹರ್ಷಿ ಮಾಡಿದ ಕೆಲಸ. ಅವನು ಕೊಟ್ಟ ಹಣ್ಣಿನಿಂದಲ್ಲವೇ ನನಗೆ ಮದುವೆಯ ಇಚ್ಛೆ ಹುಟ್ಟಿದ್ದು? ಇಲ್ಲ ದಿದ್ದರೆ ನಾನು ಬ್ರಹ್ಮಚಾರಿಯಾಗಿಯೇ ಇರು ತ್ತಿದ್ದೆನಲ್ಲಾ? ಆ ಮಹಾನುಭಾವನ ಆಶೀರ್ವಾ ದಕ್ಕೆ ವಿರೋಧವಾಗಿ ಈ ದುರ್ವಾರ್ತೆ ಏಕೆ ಹುಟ್ಟಬೇಕು? ಈ ಮದುವೆಯಿಂದಲೇ ಇಂತಹ ಅನಿಷ್ಟವುಂಟಾಗುವುದಾದರೆ, ಅದಕ್ಕೆ ಪೂರಾ ನಾನು ಹೊಣೆ ಹೇಗೆ?" ಎಂದು ತನ್ನೊ ಳಗೇ ತಾನು ತರ್ಕಿಸಿಕೊಳ್ಳುತ್ತಿದ್ದನು.

ತರ್ಕದಲ್ಲಿಯೇ ಅತ್ತಿತ್ತ ತೂಗಾಡುತ್ತಿದ್ದ ನಲ್ಲದೆ, ಒಂದು ನಿಶ್ಚಯಕ್ಕೆ ಬರಲು ಅವನಿಂ ದಾಗಲಿಲ್ಲ. 'ಇದು ಹೀಗೆಯೇ ಸರಿ' ಎಂದು ನಿಶ್ಚಯ ಮಾಡಿ ಹೇಳಬೇಕಾದರೆ ನಮ್ಮ ಕುಲ ಪುರೋಹಿತರೇ ಸರಿ, ಎಂದುಕೊಂಡು, ಪ್ರಮೋದನು ಪುರೋಹಿತರನ್ನು ಬರಮಾಡಿ ಕೊಂಡನು. ಊರಲ್ಲಿ ಹುಟ್ಟಿದ ಪ್ರವಾದ ವನ್ನೂ, ತನ್ನ ತರ್ಕವನ್ನೂ ಪುರೋಹಿತನ ಮುಂದೆ ಹೇಳಿ "ಇದಕ್ಕೇನು ನಿವೃತ್ತಿ?" ಎಂದು ಕೇಳಿದನು.



ಪುರೋಹಿತನು "ಪ್ರಭುವೇ! ವಿವಾಹವೇ ಬೇಡವೆಂದು ಹಟ ಹಿಡಿದವರೇ ನೀವು. ಆದುದ ರಿಂದ ಹಣ್ಣನ್ನು ಕೊಟ್ಟ ಆ ಋಷಿಯ ಮೇಲೆ ತಪ್ಪು ಹಾಕಲು ಬರುವುದಿಲ್ಲ. ಗಂಧರ್ವ ಕನ್ಯೆ ಯೊಡನೆ ವಿವಾಹವು ಮಾತ್ರ ಶಾಸ್ತ್ರವಿರುದ್ಧವೇ ಹೌದು" ಎಂದನು.

"ಹಾಗಾದರೆ ಇದಕ್ಕೆ ಏನೂ ನಿವಾರಣೆ ಇಲ್ಲವೇ?" ಎಂದು ರಾಜನು ತುಂಬಾ ವಿಚಾರ ದಿಂದ ಕೇಳಿದನು. ಒಂದು ಕಡೆ ಕಣ್ಣಿನ ಬೆಳ ಕಾದ ಮಹೀಪಾಲ ಕುಮಾರನೂ, ಇನ್ನೊಂದು ಕಡೆ ಆ ಕುಮಾರನನ್ನು ನೋಡಿ ಹೂಂಕರಿಸು ತ್ತಿರುವ ಮಂದಾಕಿನಿಯೂ, ಪ್ರಮೋದನ ಕಣ್ಣಿಗೆ ಕಾಣುತ್ತಿದ್ದರು. ಈ ಇಬ್ಬರ ಮಧ್ಯ ದಲ್ಲಿ ರಾಜನೀಗ ಬಿದ್ದು ಚಡಪಡಿಸುತ್ತಿದ್ದಾನೆ. ಪುರೋಹಿತನೂ ಯೋಚಿಸುತ್ತಿದ್ದ.




ಆಗ ಅರಸನ ಪಕ್ಕದಲ್ಲಿಯೇ ಕುಳಿತಿದ್ದ ಮಂದಾಕಿನಿ, ತನ್ನ ಕುತ್ತಿಗೆಯ ಮೇಲೆ ಕೈ ಸನ್ನೆ ಮಾಡುವುದನ್ನು ಪುರೋಹಿತನು ನೋಡಿಬಿಟ್ಟ. ಅರಸನು ಕೇಳಿದ ಪ್ರಶ್ನೆಗೆ ಏನಾದರೂ ಉತ್ತರ ಹೇಳಲೇಬೇಕಷ್ಟೆ? ಮಂದಾಕಿನಿ ರಾಣಿಯ ಸೂಚನೆಯೂ ತಿಳಿದು ಹೋಯಿತು. ಅವಳ ಇಚ್ಛೆಗೆ ವಿರೋಧವಾಗಿ ನಡೆದರೆ ತನಗೆ ನೂರು ವರ್ಷ ತುಂಬಿದಂತೆಯೇ! ಈ ಸಂದಿಗ್ಧ ಸಮಯದಲ್ಲಿ ಒಳ್ಳೆಯದು ಕೆಟ್ಟುದು ಎಂಬ ಯೋಚನೆಗೂ ಅವಕಾಶವಿಲ್ಲ. ಆದುದರಿಂದ ಕೂಡಲೇ ಪುರೋಹಿತನು ಹೀಗೆಂದನು:

" ಪ್ರಭು, ತಾವು ಹೇಳುವಂತೆ ಒತ್ತಾಯಿಸುವುದರಿಂದಲೇ ಹೇಳಬೇಕಾಗಿ ಬಂತು. ದೇಶಕ್ಕೆ ಬಂದಿರುವ ಈ ಅರಿಷ್ಟವು ತೊಲಗಿ ಹೋಗಬೇಕಾದರೆ, ದೇವ ಗಣಕ್ಕೆ ಸೇರಿದ ಗಂಧರ್ವ ಕಾಂತೆಗೆ ಹುಟ್ಟಿದ ಪುತ್ರನನ್ನು ದೇವ ಲೋಕಕ್ಕೇ ಕಳುಹಿಸಿ ಬಿಡಬೇಕು. ಇದು ಶಾಸ್ತ್ರವು ಹೇಳುವ ಮಾತು........"

ಇಷ್ಟು ಕೇಳುತ್ತಲೇ ಅರಸನು ಆತುರದಿಂದ—' ಏನೇನು? ಇನ್ನೊಮ್ಮೆ ಹೇಳಿ, ನನಗೆ ಅರ್ಥವಾಗಲಿಲ್ಲ" ಎಂದನು.

ಅದಕ್ಕೆ ಪುರೋಹಿತನು—" ಮಹಾಪ್ರಭು, ನಮ್ಮ ಮಹೀಪಾಲ ಕುಮಾರನನ್ನು ದೇವ ಲೋಕಕ್ಕೆ ಕಳುಹಿಸಿಬಿಟ್ಟರೆ, ರಾಜ್ಯವು ಸುಭಿಕ್ಷವಾಗುವುದೆಂದೂ, ಕುಮಾರನಿಗೆ ಒಳ್ಳೆಯ ಗತಿ ಪ್ರಾಪ್ತವಾಗಬೇಕಾದರೆ ಅವನನ್ನು ಯಥಾ ವಿಧಿಯಾಗಿ ಬಲಿ ಕೊಡಬೇಕೆಂದೂ ಪಂಡಿತರು ಹೇಳುವರು. ಪ್ರಜೆಗಳು ಕೂಡಾ ಇದೇ ವಿಷಯವನ್ನೆ ಮಾತಾಡಿಕೊಳ್ಳುತ್ತಾರೆ." ಎಂದನು.

ಇದನ್ನು ಕೇಳುತ್ತಾ ರಾಜನು ದುಃಖವನ್ನು ತಾಳಲಾರದೆ ಸಿಂಹಾಸನದ ಮೇಲೆಯೇ ಬಿದ್ದು ಹೋದನು. ಅವನಿಗೆ ಮೈಮೇಲೆ ಎಚ್ಚರಿಕೆ ಇಲ್ಲದೆ ಹೋಯಿತು. ಯಾವ ತಂದೆ ತಾನೇ ಇಂತಹ ಮಾತನ್ನು ಕೇಳಿ ತಾಳಿಕೊಂಡಾನು? ರಾಣಿ ಮಂದಾಕಿನಿಯೂ ತುಂಬಾ ದುಃಖದಲ್ಲಿ ಮುಳುಗಿ ಹೋದಳು! ಶೈತ್ಯೋಪಚಾರಗಳು ಮಾಡಿದ ನಂತರ ಪ್ರಮೋದನು ಎದ್ದನು.

ಮೊದಲೇ ದೇಶವು ದುರ್ಭಿಕ್ಷವಾದುದಕ್ಕಾಗಿ ಚಿಂತೆ, ಆದರ ಮೇಲೆ ಅಪವಾದ, ಇವುಗಳಿಂದ ಮೊದಲೇ ಕೊರಗುತ್ತಿದ್ದ ರಾಜನು,

ತನ್ನ ಮಗನನ್ನೇ ಬಲಿಕೊಡಬೇಕೆಂಬ ಪುರೋಹಿತನ ಮಾತನ್ನು ಕೇಳಿ ಸಿಡಿಲು ಬಡೆದಂತಾದನು. ಧೀರನಾದುದರಿಂದ ತನ್ನನ್ನು ತಾನೇ ಸಾವರಿಸಿಕೊಂಡು ಯೋಚಿಸ ತೊಡಗಿದನು. ಪಂಡಿತರೂ, ಪ್ರಜೆಗಳೂ, ಪುರೋಹಿತನೂ ಹೌದೆನ್ನುವುದನ್ನು ತಾನು ಅಲ್ಲವೆನ್ನುವುದು ಹೇಗೆ? ಪುತ್ರ ಪ್ರೇಮವೆಷ್ಟಿದ್ದರೂ ಪ್ರಜೆಗಳ ಮಾತಿಗೆ ಇದಿರಾಗಿ ಹೋಗುವುದು ಸಾಧ್ಯವೆ?

ಪ್ರಮೋದನು ನಿಸ್ಸಹಾಯಕನಂತೆ ಕಳೆಗೆಟ್ಟುಹೋದನು. ರಾಜ್ಯದಲ್ಲಿ ಪ್ರಜೆಗಳ ಹಾಹಾಕಾರವು ಕೇಳುತ್ತಲೇ ಇದೆ. 'ಮಹೀಪಾಲನನ್ನು ಬಲಿ ಕೊಡಬೇಕಾದ್ದೇ' ಎಂಬ ಶಬ್ದವು ರಾಜನ ಕಿವಿಯಲ್ಲಿ ಮೊಳಗುತ್ತಲೇ ಇತ್ತು. "ಆಗಲಿ! ಹಾಗೇ ಆಗಲಿ!" ಎಂದು ಪ್ರಮೋದನು ಸಮ್ಮತಿಸಿ ಬಿಟ್ಟನು.

ಮಹೀಪಾಲನನ್ನು ಬಲಿ ಕೊಡಲಿಕ್ಕಾಗಿ ಪುರೋಹಿತನು ಎಲ್ಲ ಏರ್ಪಾಡನ್ನೂ ಮಾಡ ತೊಡಗಿದನು. ಭದ್ರ ಕಾಳಿಯ ಆಲಯದಲ್ಲಿಯೇ ಬಲಿ. ಆಲಯದ ಎದುರಿನಲ್ಲಿ ಭಯಂಕರವಾದ ಬಲಿ ಪೀಠವು ಕಾಣುತ್ತಿತ್ತು. ಮುಹೂರ್ತವಿಟ್ಟ ದಿನವೂ ಬಂತು. ಹಿರಿಯರೆಲ್ಲಾ ಗುಂಪುಗೂಡಿದರು. ಸಾವಿರಾರು ಪ್ರಜೆಗಳು ನೋಡುತ್ತಿದ್ದರು. ಆದರೂ ಸಾಸಿವೆ ಬಿದ್ದರೆ ಕೇಳಿಸುವಷ್ಟು ನಿಶ್ಶಬ್ದ.

ಅತ್ತ ರಾಜ ಭವನದಲ್ಲಿ ಮಹೀಪಾಲನು ಓರಿಗೆಯ ಗೆಳೆಯರೊಡನೆ ಆಟಪಾಟಗಳಲ್ಲಿ ತಲ್ಲೀನನಾಗಿದ್ದನು. ಸೇವಕರು ಅವನನ್ನು




ಚೆನ್ನಾಗಿ ಅಲಂಕಾರ ಮಾಡಿದರು. ಬಳಿಕ ವಾದ್ಯಘೋಷಣದಿಂದ ಊರೊಳಗೆಲ್ಲಾ ಮೆರವಣಿಗೆ ಮಾಡಿಸುತ್ತ ಕಾಳೀ ಆಲಯಕ್ಕೆ ಕರೆತಂದರು. ಅಲ್ಲಿ ವೇದಿಕೆಯ ಮೇಲೆ ಅವನನ್ನು ಕೂಡಿಸಿ ಪುರೋಹಿತರು ಮಂತ್ರ ಘೋಷಣ ಮಾಡಿದರು. ಇದೆಲ್ಲಾ ಏಕೋ ಏನೋ ಎಂದುಕೊಂಡು, ಸರಳ ಸ್ವಭಾವದ ಆ ಹುಡುಗನು ಉತ್ಸಾಹದಿಂದಿದ್ದನು!

ಅಷ್ಟರಲ್ಲಿ ಪ್ರಮೋದನು ಹುಚ್ಚು ಹಿಡಿದವನಂತೆ ಅಲ್ಲಿಗೆ ಓಡಿಬಂದನು. ಬಂದು ಅಲ್ಲಿ ನೆರೆದಿದ್ದ ಗುರುಹಿರಿಯರ ಗುಂಪನ್ನು ನೋಡಿ, "ಅಯ್ಯಾ, ನನ್ನ ಮದುವೆ ಶಾಸ್ತ್ರ ವಿರುದ್ಧವೆಂದಿರಿ, ದೇವತೆಗಳಿಗೆ ದ್ರೋಹವೆಂದಿರಿ, ಇದರಿಂದಲೇ ಈಬಗೆಯ ದೇಶಾರಿಷ್ಟವುಂಟಾಯಿತೆಂದಿರಿ, ಇರಬಹುದು. ಇದಕ್ಕೆ ಪರಿಹಾರ

ವಾಗಿ ನನ್ನ ಮುದ್ದು ಮಗನನ್ನು ಬಲಿಕೊಡಲಿಕ್ಕೂ ಆತಂಕ ಪಡಿಸಲಾರೆ. ಆದರೆ ನನ್ನದೊಂದು ಸಣ್ಣ ಕೋರಿಕೆ. ಅಯ್ಯಾ ಸಭಾಸದರೆ, ಪೂಜ್ಯರೇ, ನನ್ನ ಮದುವೆಯ ಪರಿಣಾಮ ಹೀಗೆ ವಕ್ರವಾಗದಿದ್ದರೆ, ಈ ಮಹೀಪಾಲನು ಪಟ್ಟಕ್ಕೆ ಬರುವನಷ್ಟೆ? ಆದರೆ ವಿಧಿವಿಲಾಸ ಹೀಗಾಗಿ ಹೋಯಿತು. ನನ್ನ ಮುದ್ದು ಮಗು ಪಟ್ಟಾಭಿಷಿಕ್ತನಾದರೆ ಹೇಗಿರುವನೋ ಒಂದುಬಾರಿ ಕಣ್ಣಾರೆ ನೋಡಲು ಬಿಡಿರಿ. ಇದೇನನ್ನ ಕೋರಿಕೆ" ಎಂದು ಕಲ್ಲೂ ಕರಗುವಂತೆ ಹೇಳಿಕೊಂಡನು. ಇದನ್ನು ಕೇಳಿ ಜನರೆಲ್ಲಾ ಕಣ್ಣೀರು ತುಂಬಿಕೊಂಡರು.

ಈ ಮಾತು ಮಂದಾಕಿನಿಗೆ ಹಿಡಿಸಲಿಲ್ಲ. ಏನೋ ಗುಸಗುಸನೆಂದಳು. ಸನ್ನೆಮಾಡಿದಳು. ಯಾರೂ ಅದನ್ನು ಲಕ್ಷಿಸಲಿಲ್ಲ. ಹಿರಿಯ ಪುರೋಹಿತನು ಎದ್ದು ನಿಂತು—"ಧರ್ಮಪ್ರಭುಗಳಾದ ನಮ್ಮ ಮಹಾರಾಜರು ಜನವಾಕ್ಯಕ್ಕೆ ಒಪ್ಪಿಕೊಂಡೇ ಇದ್ದಾರೆ. ಇನ್ನೊಂದು ಕ್ಷಣವೋ ನಿಮಿಷವೋ ಎನ್ನುವುದರೊಳಗೆ ಕುಮಾರನ ಬಲಿ ಆಗಿಯೇ ಆಗುತ್ತದೆ. ನಮ್ಮ ರಾಜನೇ ಬಂದು ಹೀಗೆ ಕೋರಿಕೊಳ್ಳುವಾಗ ಆಗದೆನ್ನುವುದು ಮೂರ್ಖತೆಯಾದೀತು. ಬಾಲನ ತಲೆಯ ಮೇಲೆ ಒಮ್ಮೆ ಕಿರೀಟವನ್ನಿಟ್ಟು ಅರಸನ ಕೋರಿಕೆಯನ್ನು ಈಡೇರಿಸೋಣ" ಎಂದನು. ಈ ಮಾತು ಎಲ್ಲರಿಗೂ ಒಪ್ಪಿಗೆಯಾಯಿತು.

"ಇಡಿರಿ! ಕುಮಾರ ರಾಜನಿಗೆ ಕಿರೀಟವಿಡಿರಿ. ನಾವೆಲ್ಲಾ ಕಣ್ಣಿನ ಹಬ್ಬವಾಗಿ ನೋಡೋಣ" ಎಂದು ಆವೇಶದಿಂದ ಸಾವಿರಾರು ಜನರು ಕೂಗಿದರು.

ತಕ್ಷಣವೇ ಆಸ್ಥಾನದಿಂದ ಜಗಜಗಿಸುವ ರತ್ನ ಕಿರೀಟವನ್ನು ತರಿಸಿದರು. ಯಥೋಚಿತವಾಗಿ ಬಾಲ ಮಹೀಪಾಲನ ಶಿರಸ್ಸಿನಲ್ಲಿ ಅದನ್ನಿಟ್ಟರು. ಹೂಮಾಲೆ ಹಾಕಿದರು. ಕೋಲಾಹಲದೊಂದಿಗೆ ಆ ಬಾಲಕನನ್ನು ಗುಡಿಗೆ ಮೂರು ಪ್ರದಕ್ಷಿಣೆ ಮಾಡಿಸಿ, ಬಲಿಪೀಠದ ಮುಂದೆ ನಿಲ್ಲಿಸಿದರು.

ಮಂತ್ರಘೋಷದ ಮಧ್ಯೆ ಪುರೋಹಿತನು, "ಜೈ ಭವಾನಿ!" ಎನ್ನುತ್ತಾ ಕತ್ತಿ ಎತ್ತಿದನು. ಪ್ರಜೆಗಳ ನೋಟವೆಲ್ಲಾ ಆ ಬಾಲಕನ ಮೇಲೆಯೇ ನೆಟ್ಟುಹೋಗಿತ್ತು.

ಆ ಕ್ಷಣದಲ್ಲಿ— [ಇನ್ನೂ ಇದೆ.[






ಪೂರ್ವ ಕಾಲದಲ್ಲಿ ಬೃಹದ್ವಾಟವೆಂಬ ರಾಜ್ಯದಲ್ಲಿ ಸಂತುಷ್ಟಕನೆಂಬ ರಾಜನಿದ್ದ. ಬಹು ದೊಡ್ಡ ರಾಜ, ಪರಮ ಸುಖಿ. ಎಷ್ಟು ಸುಖವಾಗಿದ್ದನೆಂದರೆ, ಅವನು "ಸುಖಸಾಗರ" ನೆಂಬ ಬಿರುದನ್ನೇ ಇಟ್ಟುಕೊಂಡಿದ್ದ. ಹೊಗಳಿಸಿಕೊಳ್ಳುವುದರಲ್ಲಿ ಬಹು ತೃಪ್ತಿ ಅವನಿಗೆ. ಅಂತೆಯೇ ಅವನ ಸುತ್ತೂ ಇರುವವರು, "ಪ್ರಭುಗಳೆ, ನಿಮ್ಮ ಐಶ್ವರ್ಯದ ಮುಂದೆ ಇಂದ್ರನೂ ತಲೆ ಬಾಗಬೇಕು, ಕುಬೇರನೂ ನಾಚಬೇಕು. ಚಂದ್ರನೂ ನಿಮ್ಮ ಕಾಂತಿಯನ್ನು ಕಂಡೇ ಕ್ಷಯಿಸುವನು. ಈ ಪ್ರಪಂಚದಲ್ಲಿರುವ ಸುಖಿಗಳಲ್ಲೆಲ್ಲಾ ಶ್ರೇಷ್ಠರಾದ ಸುಖಿಗಳು ತಾವೇ." ಎಂದು ಬಾಯಿ ತುಂಬಾ ಹೊಗಳುತ್ತ, ಅವನ ಕೃಪೆಗೆ ಪಾತ್ರರಾಗಿ ಲಾಭ ಗಳಿಸುತ್ತಿದ್ದರು. ಸಂತುಷ್ಟಕನು ಅದನ್ನು ನಂಬಿ, ತನಗಿಂತ ಸುಖಿ ಯಾರೂ ಇಲ್ಲವೆಂದೇ ಉಬ್ಬಿಬಿಟ್ಟಿದ್ದ.

ಒಂದು ದಿನ ಆಸ್ಥಾನಕ್ಕೆ ಜ್ಞಾನಸಿಂಧುವೆಂಬ ಮಹಾತ್ಮನೊಬ್ಬನು ಚಿತ್ತೈಸಿದನು. ಅವನ ಮಹಿಮೆ ರಾಜನಿಗೆ ಗೊತ್ತಿತ್ತು. ಆದುದರಿಂದ, ರಾಜನು ಆ ಜ್ಞಾನಿಯನ್ನು ಬಹಳವಾಗಿ ಆದರಿಸಿ "ಮಹಾತ್ಮರೇ, ತಮ್ಮ ಆಗಮನದಿಂದ ನಮ್ಮ ರಾಜ್ಯವೇ ಪವಿತ್ರವಾಯಿತು" ಎನ್ನುತ್ತಾ ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿದನು. ಹಾಗು ಪಂಚಭಕ್ಷ್ಯ ಪರಮಾನ್ನಗಳಿಂದ ಔತಣ ಮಾಡಿಸಿದನು. ದೊಡ್ಡ ಸಂಗೀತ ಕಚೇರಿ ಸಾಗಿಸಿದನು. ಕವಿಗಳಿಂದ ಪದ್ಯಗಳನ್ನು ಹೇಳಿಸಿದನು. ನರ್ತಕರಿಂದ ನಾಟ್ಯಪ್ರದರ್ಶನ ಮಾಡಿಸಿದ್ದೂ ಆಯಿತು.

ಜ್ಞಾನಸಿಂಧು ಇದೆಲ್ಲಾ ನೋಡುತ್ತಾ ಸುಮ್ಮನೆಯೇ ಇದ್ದನು. ಎಲ್ಲರಂತೆ ಅವನೂ ತನ್ನ ವೈಭವವನ್ನು ನೋಡಿ ಹೊಗಳುತ್ತಾನೆಂದು, ಸಂತುಷ್ಟಕನು ಎದುರು ನೋಡಿದ್ದು ವ್ಯರ್ಥವಾಯಿತು. ಕಡೆಗೆ ರಾಜನು ತಾಳ್ಮೆಗೆಟ್ಟು—"ಮಹಾತ್ಮರೇ, ತಾವು ಎಷ್ಟೋ ದೇಶಗಳನ್ನು ಸುತ್ತಿದವರು. ನನಗಿಂತಲೂ ಸುಖಿಯಾಗಿರುವವನನ್ನು ಎಲ್ಲಿಯಾದರೂ ನೋಡಿದ್ದೀರಾ?" ಎಂದು ಕೇಳಿದನು. ಅದಕ್ಕೆ ಜ್ಞಾನಸಿಂಧು—"ಯಾಕಿಲ್ಲ? ನಮ್ಮ ಊರಿನಲ್ಲಿ ಪ್ರತಾಪನೆಂಬೊಬ್ಬನಿದ್ದ. ಅವನು ಎಲ್ಲರಿ

ಆರ್. ಕಲ್ಯಾಣಿ - ಬೊಂಬಾಯಿ



ಗಿಂತಲೂ ಸುಖಿಯೆಂದು ಹೇಳಬಹುದು" ಎಂದನು. "ಪ್ರತಾಪನೆ? ಅವನಾರು? ನಾನು ಕೇಳೇ ಇಲ್ಲವಲ್ಲಾ? ಆ ಅನಾಮಧೇಯಕನು ನನಗಿಂತಲೂ ಸುಖಿಯೇ! ಆಶ್ಚರ್ಯ!" ಎಂದನು ಸಂತುಷ್ಟಕ.

"ಪ್ರತಾಪನು ನಿನ್ನಂತೆ ಹೆಸರು ಪ್ರತಿಷ್ಠೆಗಳನ್ನು ಸಂಪಾದಿಸಲಿಲ್ಲವೆಂಬುದೇನೋ ನಿಜ. ಆದರೆ ಪರಮ ಸುಖಿ ಎನ್ನಲು ಸಂದೇಹವಿಲ್ಲ. ಕಷ್ಟಪಟ್ಟು ಸಂಪಾದಿಸಿ, ಹೊಟ್ಟೆ ತುಂಬಾ ತಿಂದು, ಮಕ್ಕಳನ್ನೂ ಸೊಸೇಂದಿರನ್ನೂ ಅಳಿಯಂದಿರನ್ನೂ, ಮೊಮ್ಮಕ್ಕಳನ್ನೂ ಪಡೆದ. ಏನೊಂದು ಚಿಂತೆಯೂ ಇಲ್ಲದೆ ಅರುವತ್ತು ವರ್ಷ ಬದುಕಿದ. ಕಡೆಗೆ ಮಾತೃ ದೇಶಕ್ಕಾಗಿ ಯುದ್ಧ ಮಾಡುತ್ತ ವೀರ ಸ್ವರ್ಗವನ್ನು ಸೇರಿದ" ಎಂದನು ಜ್ಞಾನಸಿಂಧು.

"ಹೋಗಲಿ, ಆ ಪ್ರತಾಪನ ನಂತರವಾದರೂ ನಾನು ಲೆಕ್ಕಕ್ಕೆ ಬಂದೇನೇ?" ಎಂದು ಪುನಃ ಕೇಳಿದನು ರಾಜ.

"ಹಾಗೆನ್ನಲಾರೆ, ಅವನ ನಂತರ ಬರತಕ್ಕ ಅಣ್ಣತಮ್ಮಂದಿರಿಬ್ಬರು ನಮ್ಮ ಊರಲ್ಲಿಯೇ ಇದ್ದಾರೆ. ಒಳ್ಳೆಯ ದೇಹಾರೋಗ್ಯ ಉಳ್ಳವರು. ನಿರ್ಮಲ ಹೃದಯರು. ಪರೋಪಕಾರ ಪಾರಾಯಣರು. ಮರಣ ಯಾತನೆಯನ್ನು ಅನುಭವಿಸದೆಯೇ ಸತ್ತವರು" ಎಂದನು ಜ್ಞಾನಸಿಂಧು.

ರಾಜನಿಗೆ ಸಿಟ್ಟು ಬಂದಿತು.—"ಏನೋ ದೊಡ್ಡವರೆಂದು ನಾನು ಗೌರವದಿಂದ ಕೇಳಿದರೆ ಇದೋ ನೀವು ಹೇಳುವುದು? ಆ ಬಡಜೀವಿಗಳು ನನಗಿಂತ ಸುಖಿಗಳೆ?" ಎಂದನು. ಜ್ಞಾನಸಿಂಧು ನಗುತ್ತಾ—"ರಾಜಾ, ಕೋಪವೇಕೆ? ಈ ಐಶ್ವರ್ಯ ವೈಭವಗಳೆಲ್ಲಾ ಈಗ ನಿನಗೆ ಸುಖವಾಗಿರುವ ಮಾತು ನಿಜವೇ, ಆದರೆ ಯಾವುದೂ ಶಾಶ್ವತವಲ್ಲ. ನೀನಿನ್ನೂ ಎಷ್ಟು ಕಾಲ ಬದುಕಿರುವೆಯೋ? ಕಡೆಯವರೆಗೂ ಹೀಗೆಯೇ ಸುಖವಾಗಿರುವಿಯೆಂದು ಹೇಗೆ ಹೇಳಬಹುದು?" ಎಂದಂದು ಜ್ಞಾನಸಿಂಧು ತನ್ನ ದಾರಿಯನ್ನು ಹಿಡಿದುಕೊಂಡು ಹೊರಟು ಹೋದನು.

"ಪ್ರಭು! ಆ ಮುದುಕನ ಗಡ್ಡವನ್ನು ನೋಡಿ ಮೋಸ ಹೋಗಿ ಬೇಡದ ಮರ್ಯಾದೆಯೆಲ್ಲಾ ಅವನಿಗೆ ಮಾಡಿದಿರಿ. ಎತ್ತಿಗೇನು ಗೊತ್ತು ಮಾಣಿಕ್ಯದ ಬೆಲೆ? ತಮ್ಮ ವೈಭ

ವವೂ ಸುಖವೂ ಈ ಬಡ ಸನ್ಯಾಸಿಗೇನು ಗೊತ್ತು? ಮೂರು ಮಾತಿಗೂ ಸಂತುಷ್ಟಕ ಮಹಾರಾಜರೇ ಪರಮ ಸುಖಿ ಎನ್ನಲು ಸಂದೇಹವೇ ಇಲ್ಲ...." ಎಂದು ಮುಂತಾಗಿ ಸುತ್ತೂ ಇದ್ದವರು ಸ್ತುತಿ ಮಾಡಿ ಅವನನ್ನು ಸಂತೋಷದಲ್ಲಿ ಮುಳುಗಿಸಿಬಿಟ್ಟರು. ಜ್ಞಾನ ಸಿಂಧು ಹೇಳಿ ಹೋದುದನ್ನೆಲ್ಲಾ ಒಂದು ಕೆಟ್ಟ ಸ್ವಪ್ನದಂತೆ ಭಾವಿಸಿ, ಅದನ್ನು ಮರೆತು ಅರಸನು ಸಂತುಷ್ಟನಾಗಿಯೇ ಇದ್ದನು. ದಿನಗಳುರುಳಿದುವು.

ವರುಷ ಒಂದು ಹೋಯಿತು, ಒಂದು ದಿನ ರಾಜನು ಅಂತಃಪುರದಲ್ಲಿ ಗಾಢವಾದ ನಿದ್ರೆಯಲ್ಲಿದ್ದನು. ಆಗ "ಶತ್ರುಗಳು! ಶತ್ರುಗಳು!" ಎಂಬ ಕೂಗು ಕೇಳಿಸಿತು. ಅರಸನು ಗಾಬರಿಯಿಂದೆದ್ದನು. "ಪ್ರಭುವೇ! ನಮ್ಮ ಸಾಮಂತನಾದ ಪ್ರಬಲಸಿಂಹನು ಅಪಾರ ಸೇನೆಯೊಂದಿಗೆ ಬಂದುಬಿಟ್ಟ. ರಹಸ್ಯ ಮಾರ್ಗದಿಂದ ಶತ್ರುಗಳು ಕೋಟೆಯೊಳಕ್ಕೂ ಹೊಕ್ಕು ಬಿಟ್ಟರು. ಇನ್ನೇನೂ ಲಾಭವಿಲ್ಲ!" ಎಂದರು ರಾಜ ಭಟರು.

"ಪ್ರಬಲಸಿಂಹ ಮಹಾ ರಾಜನಿಗೆ ಜೈ!" ಎಂದು ಘೋಷಿಸುತ್ತಾ, ಶತ್ರುಗಳು ಒಳಗೆ ಬರುವುದನ್ನು ಸಂತುಷ್ಟಕನೇ ನೋಡಿದನು. ಇನ್ನು ಒಂದು ಕ್ಷಣ ತಡೆದರೂ ತನ್ನ ಪ್ರಾಣವು ದಕ್ಕದೆಂದು ಸಂತುಷ್ಟಕನಿಗೆ ಗೊತ್ತಾಯಿತು. ಕೂಡಲೇ ತನ್ನ ರಾಜ ಭೂಷಣಗಳನ್ನು ಕಳೆದು ಮಾರು ವೇಷ ಹಾಕಿ



ಕೊಂಡು ಓಡಿ ಹೋಗಲಾರಂಭಿಸಿದನು. "ಆ ಓಡುತ್ತಿರುವವನನ್ನು ಹಿಡಿಯಿರಿ!" ಎಂದು ಶತ್ರು ಸೇನಾಧಿಪತಿಯ ಆಜ್ಞೆ ಕೇಳಿತು. ಸೈನಿಕರು ಅವನನ್ನು ಹಿಡಿದರು. ಅವನು ಸಂತುಷ್ಟಕ ರಾಜನೆಂದು ತಿಳಿಯದೆ ಸೈನಿಕನೊಬ್ಬನು ಅವನನ್ನು ಕೊಂದು ಹಾಕಲು ಕತ್ತಿಯನ್ನೆತ್ತಿದನು. ಇನ್ನು ಬದುಕುವುದಕ್ಕಿಂತಲೂ ಸಾಯುವುದೇ ಮೇಲೆಂದುಕೊಂಡು "ಕೊಲ್ಲು ನನ್ನನ್ನು" ಎಂದು ಅರಸನು ಧೈರ್ಯವಾಗಿ ನಿಂತನು.

ಆದರೆ, ಸಂತುಷ್ಟಕ ರಾಜನ ಹಿಂದೆಯೇ ಅವನ ಕುಮಾರನೂ ನಿಂತಿದ್ದ. ಅವನು ಬಾಯಿ ಬಾರದ ಮೂಕ. ತನ್ನ ತಂದೆಯ ಮೇಲಿರುವ ಅಪಾಯವನ್ನು ನೋಡಿ ಅವನು "ಇವರು ನನ್ನ ತಂದೆ ಸಂತುಷ್ಟಕ ಮಹಾರಾಜರು! ಕೊಲ್ಲ ಬೇಡಿ!" ಎಂದು ಕೂಗುತ್ತಾ ಮುಂದೆ ಬಂದು

ನಿಂತ. ಏನಾಶ್ಚರ್ಯ! ಗಾಬರಿಯಿಂದ ಅವನ ಬಾಯಿ ಒಡೆದು ಮಾತು ಹೊರಗೆ ಬಂದಿತ್ತು! ಕೂಡಲೇ ಕತ್ತಿ ಎತ್ತಿದ ಸೈನಿಕನು ನಿಂತುಬಿಟ್ಟನು. ಸಂತುಷ್ಟಕನನ್ನು ಬಂಧಿಸಿ ಪ್ರಬಲಸಿಂಹನ ಮುಂದೆ ಎಳೆದುಕೊಂಡು ಹೋದರು.

"ಶತ್ರುಶೇಷವನ್ನು ಉಳಿಸಬಾರದು" ಎಂದುಕೊಂಡು ಪ್ರಬಲಸಿಂಹನು, "ಇವನನ್ನು ಸುಟ್ಟು ಕೊಂದುಬಿಡಿ" ಎಂದು ಆಜ್ಞಾಪಿಸಿದನು.

ಕಟ್ಟಿಗೆಗಳನ್ನು ಸೇರಿಸಿ ಚಿತೆಯನ್ನು ಏರ್ಪಡಿಸಿದರು. ಆಮೇಲೆ ಸಂತುಷ್ಟಕನನ್ನು ಚಿತೆಯ ಮಧ್ಯದಲ್ಲಿ ಕೂಡಿಸಿದರು. ಸಂತುಷ್ಟಕನನ್ನು ಹೊಗಳಿದವರು ಕೂಡಾ ಈಗ ನೋಟಕರ ಗುಂಪಿನಲ್ಲಿ ನಿಂತಿದ್ದಾರೆ!

ಸಂತುಷ್ಟಕನೂ ಎಲ್ಲವನ್ನೂ ನೋಡಿದ. ತನ್ನದೆಂದು ನಂಬಿದ್ದು ಒಂದೂ ತನಗಿಲ್ಲವೆಂದು ಗೊತ್ತಾಯಿತು. "ಹಾ! ಈಗ ನನಗೇನಿದೆ? ಇಷ್ಟೊಂದು ಸ್ವಲ್ಪಹೊತ್ತಿನಲ್ಲಿ ಎಷ್ಟುದೊಡ್ಡ ಮಾರ್ಪಾಡು! ಎಷ್ಟೋ ಸುಖಪಟ್ಟ ನಾನು ಈಗ ಎಂತಹ ಮರಣಕ್ಕೆ ಈಡಾದೆ! ಜ್ಞಾನಸಿಂಧು ಹೇಳಿದ್ದು ಅಕ್ಷರಶಃ ನಿಜ. ಬಾಳುವೆ ಮುಗಿಯುವವರೆಗೂ ಸುಖಿಯಾರು, ದುಃಖಿ ಯಾರು ಎಂದು ನಿಶ್ಚಯಿಸಲಾಗದು" ಎಂದುಕೊಂಡು ಕಣ್ಣೀರು ತುಂಬಿ "ಹಾ! ಜ್ಞಾನಸಿಂಧೂ! ಜ್ಞಾನಸಿಂಧೂ!" ಎಂದು ಅಳತೊಡಗಿದನು.

"ಜ್ಞಾನಸಿಂಧು" ಎಂಬ ಶಬ್ದ ಕಿವಿಗೆ ಬೀಳುತ್ತಲೇ, ಪ್ರಬಲಸಿಂಹನು "ಈಗ ಆ ಮಹಾತ್ಮರ ಹೆಸರೇಕೆ ಬಂತು?" ಎಂದು ವಿಚಾರಿಸಿದನು. ಅಲ್ಲಿದ್ದವರು ಹಿಂದೆ ನಡೆದ ಸಂಗತಿಯನ್ನು ವಿವರಿಸಿದರು. ಅದನ್ನು ಕೇಳಿ ಪ್ರಬಲಸಿಂಹನು "ಹೌದು, ಆ ಮಹಾತ್ಮನು ಹೇಳಿದ್ದು ನಿಜವೇ, ಯಾರ ಸ್ಥಿತಿಯು ಹೇಗೆ ಮಾರ್ಪಡುವುದೋ? ನನ್ನ ಸ್ಥಿತಿಯೂ ಮುಂದೇನಾಗುವದೋ!...." ಎಂದುಕೊಂಡು ಸಂತುಷ್ಟಕನನ್ನು ಚಿತೆಯಿಂದ ಕೆಳಗಿಳಿಸಿದನು. ಮಾತ್ರವಲ್ಲ, ಈಗ ಇಬ್ಬರೂ ನಿರ್ವಿಕಾರಚಿತ್ತದವರಾಗಿಬಿಟ್ಟರು. ಪ್ರಬಲಸಿಂಹನ ದಯೆಯಿಂದ ಸಂತುಷ್ಟಕನು ಮತ್ತೆ ರಾಜನಾಗುವ ಯೋಗ ಬಂತು. ಆದರೆ ಸಂತುಷ್ಟಕನು ತನ್ನ ಕುಮಾರನಿಗೇ ಆ ಯೋಗವನ್ನು ಬಿಟ್ಟುಕೊಟ್ಟು, ವೈರಾಗ್ಯದಿಂದ ತಾನು ತಪಸ್ಸಿಗೆ ಹೋದನು.






ಅತ್ತೀಪುರದ ಪಟೇಲರಾದ ಗೋಪಯ್ಯನವರ ಮಗ ತಿಮ್ಮಪ್ಪ. ಇವನಿಗೆ ಹದಿನಾಲ್ಕು ವರ್ಷ ವಯಸ್ಸು. ಇನ್ನೂ ತನಗೆ ಮದುವೆಯಾಗಿಲ್ಲವಲ್ಲಾ ಎಂಬ ಆತುರ ಅವನಿಗೆ. ಅವನ ದೊಡ್ಡಮ್ಮನ ಮಗ ಕೃಷ್ಣಯ್ಯನಿಗೆ, ಸೋದರ ಮಾವನ ಮಗ ಶ್ಯಾಮನಿಗೆ, ನೆರೆಮನೆಯ ನರಸಯ್ಯನಿಗೆ ಇವರಿಗೆಲ್ಲಾ ಮದುವೆಯ ಭಾಗ್ಯವಾಗಿತ್ತು. ಮದುವೆ ಎಂದರೆ ಎಷ್ಟು ಗದ್ದಲ? ಏನು ಸಂತೋಷ?

ಆ ಮದುವೆಗೆ ತಿಮ್ಮಪ್ಪ ತಾಯಿಯೊಂದಿಗೆ ಹೋಗಿದ್ದ. ಅಲ್ಲಿಯ ಔತಣವನ್ನೂ, ಊಟ, ಉಪಚಾರ, ಸಡಗರ, ಮೆರವಣಿಗೆಗಳನ್ನೂ, ನೋಡಿದಾಗ, ತನಗೆ ಕೂಡಾ ಆ ಬಗೆಯ ಉತ್ಸವ ಜರುಗಿದರೆ ಎಷ್ಟು ಒಳ್ಳೆಯದಿತ್ತು ಎಂದುಕೊಳ್ಳುತ್ತಿದ್ದ.

ಈ ಕುತೂಹಲವನ್ನು ತಾಳಲಾರದೆ ಒಂದು ದಿನ ಅವನು ತಾಯಿಯೊಡನೆ "ಅಮ್ಮಾ, ನನಗೆ ಮದುವೆ ಮಾಡುವುದಿಲ್ಲವೆ?" ಎಂದು ಕೇಳಿದ. ಅದೇ ಸಮಯಕ್ಕೆ ಸರಿಯಾಗಿ ಪಕ್ಕದ ಮನೆಯಿಂದ "ಸುಭದ್ರೆ" ಎಂಬ ಎಂಟು ವರ್ಷದ ಹುಡುಗಿ ಅಲ್ಲಿಗೆ ಬಂದಳು. ಅವಳು ಒಳ್ಳೇ ಬೆಳುಗೆಂಪಾದ ಚೆಲುವೆ.

ತಿಮ್ಮಪ್ಪನ ತಾಯಿ ಸಾವಿತ್ರಮ್ಮ ಆ ಹುಡುಗಿಯನ್ನು ಕುರಿತು "ಏನೇ ಸುಭದ್ರ, ನಮ್ಮ ತಿಮ್ಮಪ್ಪನನ್ನು ಮದುವೆ ಮಾಡಿಕೊಳ್ಳುತ್ತೀಯಾ?" ಎಂದು ತಮಾಷೆಯಾಗಿ ಕೇಳಿದಳು. "ಉಹುಂ, ನನಗೆ ಬೇಡ" ಎಂದು ಅವಳು ತಲೆಯಾಡಿಸಿದಳು. "ಯಾಕೆ ಬೇಡ" ಎಂದು ಸಾವಿತ್ರಮ್ಮ ಪುನಃ ಕೇಳಿದಳು, "ಕಪ್ಪಾಗಿದ್ದಾನೆ...." ಎಂದು ಹೇಳುತ್ತಾ ಸುಭದ್ರ ಬಂದ ಕೆಲಸವನ್ನು ಮರೆತು ತನ್ನ ಮನೆಗೆ ಓಡಿದಳು. ಮದುವೆಯ ಮಾತು ಕೇಳಿ ಅವಳಿಗೆ ನಾಚುಗೆಯಾಗಿತ್ತು!

ತಿಮ್ಮಪ್ಪನಿಗೆ ಬಹಳ ಅವಮಾನವೆನಿಸಿತು- ನಿಜಕ್ಕೂ ಅವನು ಕಪ್ಪೆ. ಆದರೂ ಕಂಡದ್ದು ಹೇಳಿದರೆ ಕೆಂಡದಂತಹ ಕೋಪ, ಅಲ್ಲವೆ? ಆದರೆ ಮಾಡುವುದೇನು?

ಮುಂದೆ ಕೆಲವು ದಿನಗಳ ಮೇಲೆ ತಿಮ್ಮಪ್ಪ ಅವನ ಅಕ್ಕನ ಊರಿಗೆ ಹೋಗಿದ್ದ. ಅಕ್ಕನ ಹೆಸರು ಚಂದ್ರಾವಳಿ. ಅವಳ ಗಂಡನ ಹೆಸರು

ಎಚ್. ನಾರಾಯಣರಾವ್ - ಕಾಸರಗೋಡು



ಭಾಸ್ಕರ. ಅವನು ತಿಮ್ಮಪ್ಪನಂತಿಲ್ಲದೆ, ಒಳ್ಳೇ ಕೆಂಪಗಾಗಿ ಕಾದ ಬಂಗಾರದಂತೆ ಮಿರಿಗುಡುತ್ತಿದ್ದ. ಅವನ ಚೆಲುವಾದ ಬಂಗಾರದ ಛಾಯೆಯನ್ನು ನೋಡಿದಾಗ ತಿಮ್ಮಪ್ಪನಿಗೆ ಬಹಳ ಕುತೂಹಲವಾಗುತ್ತಿತ್ತು. ಅದರೊಂದಿಗೆ ತನಗೆ ಅಂತಹ ಬಂಗಾರದ ಛಾಯೆ ಇಲ್ಲವಲ್ಲ ಎಂಬ ಅಸೂಯೆಯೂ ಏಳುತ್ತಿತ್ತು.

ಭಾಸ್ಕರ ಭಾವನೊಡನೆ ಏನೋ ಕೇಳಬೇಕೆಂದು ತಿಮ್ಮಪ್ಪ ನೆನೆಸುತ್ತಿದ್ದ. ಪ್ರಾಯದಲ್ಲಿ ಅವನು ತುಂಬಾ ದೊಡ್ಡವನಾಗಿರುವುದರಿಂದ ಕೇಳಲಿಕ್ಕಾಗುತ್ತದೆಯೇ? ಆದರೂ ಒಂದು ದಿನ ಅವನು ಸಮಯ ನೋಡಿ ಮೆಲ್ಲನೆ ಭಾಸ್ಕರನ ಬಳಿಗೆ ಹೋಗಿ—"ಬಾವಾ, ನಿಮ್ಮ ಮೈಗೆ ಈ ಬಂಗಾರದ ಬಣ್ಣ ಹೇಗೆ ಬಂತು?" ಎಂದು ಕೇಳಿಬಿಟ್ಟ.

ಭಾಸ್ಕರ ಬಹಳ ತುಂಟಬುದ್ಧಿಯವ, ಒಳ್ಳೇ ಕುಚೋದ್ಯಗಾರ. ಅಂತೆಯೇ ಒಳಗೊಳಗೇ ನಗುತ್ತ ಹೀಗೆಂದ:

"ಬಣ್ಣಕ್ಕೇನು ಬಂತೋ ಮಹಾ? ನಾನು ಸಹಾ ಸಣ್ಣವನಾಗಿರುವಾಗ ನಿನ್ನ ಹಾಗೆಯೇ ಕರ್‍ರಗಾಗಿದ್ದೆ. ನಿನಗಿಂತಲೂ ಕಪ್ಪು. ಆದಕ್ಕೇ ಎಲ್ಲರೂ ನನ್ನನ್ನು 'ಕರಿನೇರಳೆ ಹಣ್ಣು' ಎಂದು ಕರೆಯುತ್ತಿದ್ದರು. ನಾನು ಒಮ್ಮೆ ನನ್ನ ಮಾವನೊಂದಿಗೆ ಕೇಳಿದೆ. ನನ್ನ ಮಾವನ ಮೈ ಒಳ್ಳೇ ಬಂಗಾರದ ಬಣ್ಣ. ನಾನು ಕೇಳಿದ್ದಕ್ಕೆ ಅವರು ಆ ಗುಟ್ಟು ಹೇಳಿಬಿಟ್ಟರು."

ಎಂದಿಷ್ಟೇ ಹೇಳಿ ಭಾಸ್ಕರನು ಸುಮ್ಮನಾಗಿಬಿಟ್ಟ. ಇನ್ನು ತಿಮ್ಮಪ್ಪನಿಂದ ಸುಮ್ಮನಿರಲಾದೀತೆ? "ಅದೇನು ಗುಟ್ಟು ಬಾವಾ? ನನಗೆ ಹೇಳೋದಿಲ್ವೆ?" ಎಂದ.

"ಹೇಳುತ್ತೇನೆ ತಡಿ. ಶ್ವಾಸ ಬಿಡಬೇಡವೇ ನಾನು? ಮತ್ತೇನಿಲ್ಲ, ಕೆಂಪಗೆ ಕಾದ ಇಟ್ಟಿಗೆ ಕಲ್ಲನ್ನು ಪುಡಿಮಾಡಿ ಇಟ್ಟುಕೊಳ್ಳಬೇಕು. ದಿನಾ ಸ್ನಾನ ಮಾಡುವಾಗ ಆ ಪುಡಿಯಿಂದ ದೇಹವನ್ನೆಲ್ಲ ತಿಕ್ಕುತ್ತ ಶುಭ್ರವಾಗಿ ಮೀಯಬೇಕು. ಬರೀ ನಾಲ್ಕುದಿನ ಹೀಗೆ ಮಾಡಿದರೆ ಸಾಕು. ಕಪ್ಪೆಲ್ಲಾ ಹೋಗಿ, ನೀಲವಾಗಿ ಅರಸಿನಕ್ಕೆ ತಿರುಗಿ, ಕಡೆಗೆ ಗುಲಾಬಿ ಎಸಳಿನ ಕಾಂತಿ ಬಂದುಬಿಡುತ್ತದೆ" ಎಂದು ಹೇಳಿದ.

ಬಳಿಕ "ತಿಮ್ಮ, ಒಂದು ಲೋಟ ನೀರು ತಂದು ಕೊಡೊ" ಎಂದರೆ ತಿಮ್ಮನೆಲ್ಲಿದ್ದಾನೆ?

ಅವನು ಬಲು ಉತ್ಸಾಹದಿಂದ ಎಲ್ಲಿಗೋ ಓಡಿ ಬಿಟ್ಟಿದ್ದ. ಭಾಸ್ಕರನು ತನ್ನ ಕೆಲಸದಮೇಲೆ ಹೊರಟುಹೋದನು.

ಊಟದ ವೇಳೆ ಬಂತು. ತಿಮ್ಮ ಬರಲೇ ಇಲ್ಲ. "ತಿಮ್ಮಪ್ಪನನ್ನು ಎಲ್ಲಿಗಾದರೂ ಕಳಿಸಿದ್ದೀರಾ?" ಎಂದು ಚಂದ್ರಾವಳಿ ಪತಿಯೊಡನೆ ಕೇಳಿದಳು. "ಇಲ್ಲವಲ್ಲಾ! ಊರು ನೋಡಲಿಕ್ಕಾಗಿ ಹೋಗಿದ್ದಾನೋ ಏನೋ, ಬಂದಾನು" ಎಂದು ಭಾಸ್ಕರನು ಊಟವನ್ನು ತೀರಿಸಿಕೊಂಡು ತನ್ನ ಕೆಲಸಕ್ಕೆ ಹೊರಟು ಹೋದನು.

ತಮ್ಮನ ಬರುವಿಕೆಗಾಗಿ ದಾರಿ ನೋಡಿ ನೋಡಿ ಚಂದ್ರಾವಳಿಗೆ ಸಾಕಾಯಿತು. ತುಸು ಗಾಬರಿಯೂ ಆಯಿತು. ಅವನನ್ನು ಹುಡುಕಲಿಕ್ಕೆ ಕೆಲಸದವಳನ್ನು ಕಳುಹಿಸಿದಳು. ಅವಳು ಊರೆಲ್ಲಾ ತಿರುಗುತ್ತಾ ಕಡೆಗೆ ಕೆರೆಯ ಬದಿಗೆ ಹೋಗಿ ನೋಡಿದಾಗ, ತಿಮ್ಮಪ್ಪ ಸ್ನಾನ ಮಾಡುತ್ತಿದ್ದ.

ಅವನು ಕೆರೆಯ ಮೆಟ್ಟಲಿನಮೇಲೆ ನಿಂತುಕೊಂಡು, ಇಟ್ಟಿಗೆಯ ಪುಡಿಯಿಂದ ತನ್ನ ಬಲವನ್ನೆಲ್ಲಾ ಉಪಯೋಗಿಸಿ ದೇಹವನ್ನು ತಿಕ್ಕುತ್ತಾ ಇರುವುದನ್ನು ನೋಡಿ ಆ ಕೆಲಸದವಳು ತನ್ನೊಳಗೇ ನಕ್ಕಳು. ಬಳಿಕ—"ಸ್ವಾಮಿ, ನಿಮ್ಮ ಅಕ್ಕನವರು ನಿಮಗಾಗಿ ಕಾದಿದ್ದಾರೆ. ಬೇಗ ಬನ್ನಿ" ಎಂದು ಹೇಳಿ ಅವಳು ಹೋದಳು.



ಅನಂತರ ಒಂದು ಗಂಟೆ ತಾಳಿ ತಿಮ್ಮಪ್ಪ ಮನೆಗೆ ಬಂದ. "ಏನೋ ತಿಮ್ಮ, ಬೆಳಗಿನಿಂದ ಈ ಒಂದು ಗಂಟೆಯವರೆಗೆ ಏನು ಮಾಡುತ್ತಿದ್ದಿಯಾ?" ಎಂದು ಕೇಳಿದಳು ಚಂದ್ರಾವಳಿ. ತಿಮ್ಮಪ್ಪನು ಭಾವ ಹೇಳಿದ ಗೋಸಾಯಿಯ ಗುಟ್ಟನ್ನು ಮೆಲ್ಲನೆ ವಿವರಿಸಿ ಹೇಳೋಣವೆಂದುಕೊಂಡು—"ಏನಿಲ್ಲ, ಏನಿಲ್ಲ" ಎನ್ನುತ್ತಾ ಊಟ ಮಾಡಿ ಹೊರಗೆ ಹೋದ.

ತನ್ನ ದೇಹಕಾಂತಿಯಲ್ಲಿಉಂಟಾಗುವ ಬದಲಾವಣೆಯನ್ನು ಪರೀಕ್ಷಿಸುತ್ತಾ ಅವನು ಜಗುಲಿಯ ಬದಿಯಲ್ಲಿ, ತಣ್ಣನೆಯ ಗಾಳಿಗೆ ಮೈಯೊಡ್ಡಿ ಕುಳಿತ. ಅಷ್ಟರಲ್ಲಿ ದೇಹದಲ್ಲಿ ಉರಿ ಪ್ರಾರಂಭವಾಗಿ ಬಾಧೆ ಪಡುತ್ತ, ಕೂತುಕೊಳ್ಳಲಾರದೆ ಅಲ್ಲಿಯೇ ಮಲಗಿದ. ಏಳಲಿಕ್ಕೂ ಕೂಡಲಲ್ಲ ಅವನಿಗೆ.

ಸಂಜೆಯಲ್ಲಿ ಭಾಸ್ಕರನು ಬಂದು—"ಎಲ್ಲಿದ್ದಾನೆ ತಿಮ್ಮ? ಅವನನ್ನು ಸಿನಿಮಾಕ್ಕೆ ಕರೆದುಕೊಂಡು ಹೋಗೋಣ ಎಂದಿದ್ದೇನೆ. ಅದಕ್ಕೇ ಬೇಗಬಂದೆ" ಎಂದನು.

ಪುನಃ ತಿಮ್ಮನನ್ನು ಹುಡುಕಲಿಕ್ಕೆ ಹೋದರು. ಜಗುಲಿಯ ಮೂಲೆಯಲ್ಲಿ ಕಣ್ಣುಮುಚ್ಚಿಕೊಂಡು ಬಾಧೆ ಪಡುತ್ತಿರುವ ತಿಮ್ಮನನ್ನು ನೋಡಿ "ಏನಪ್ಪಾ ಮಲಗಿದ್ದಿ?" ಎಂದು ಕೇಳಿದರು. ಜ್ವರ ಬಂದಿರುವುದೇನೋ ಎಂದು ಮೈಯಲ್ಲಿ ಕೈಯಿಟ್ಟು ನೋಡಿದಾಗ, ದೇಹವೆಲ್ಲಾ ಗೀರಿಹೋಗಿ ಕೆಂಪಗಾಗಿ ತೋರಿತು. ಚಂದ್ರಾವಳಿಗೆ ಆಶ್ಚರ್ಯವಾಯಿತು.

ತಿಮ್ಮನು ಬಾವನನ್ನು ನೋಡಿ—"ಬಾವಾ ನೀವು ಹೇಳಿದಂತೆಯೆ ಮಾಡಿದೆ: ಈಗ ನನ್ನ ಮೈರಂಗು ಬದಲಾವಣೆ ಹೊಂದುತ್ತಾ ಇದೆ" ಎಂದನು.

"ಏನು!" ಎಂದರು ಇಬ್ಬರೂ ಆಶ್ಚರ್ಯದಿಂದ.

"ನಾಲ್ಕು ದಿನ ಮಿಂದರೆ ಬಂಗಾರದ ಛಾಯೆ ಬರುತ್ತದೆಂದಿರಿ ನೀವು, ಅಷ್ಟರವರೆಗೆ ತಾಳುವುದು ಯಾಕೆ ಅಂತ ನಾನು ಒಂದೇ ಸಾರಿ ನಾಲ್ಕು ಇಟ್ಟಿಗೆ ಪುಡಿಮಾಡಿ, ಎಲ್ಲಾ ಪುಡಿಯೂ ಹಾಕಿ ತಿಕ್ಕಿ ಮಿಂದುಬಿಟ್ಟೆ. ನನ್ನ ಕಪ್ಪು ಬಣ್ಣ ಹೋಗಿ ಆರೆಂಜು ಬಣ್ಣ ಬಂತು. ಅಲ್ಲವೆ ಬಾವಾ?" ಎಂದು ತಿಮ್ಮನು ತನ್ನ ಬಾಧೆಯನ್ನು ತಾಳಿಕೊಳ್ಳುತ್ತಾ ಹೇಳಿದನು.

ಭಾಸ್ಕರನು "ಅಯ್ಯೊ" ಎಂದು ನಕ್ಕನು. ಚಂದ್ರಾವಳಿ "ಅದೇನು? ಇಟ್ಟಿಗೆಪುಡಿ ಏಕೆ?" ಎಂದಳು ಒಂದೂ ತಿಳಿಯದೆ.

"ಎಲ್ಲಾ ಆಮೇಲೆ ಹೇಳುತ್ತೇನೆ. ಮೊದಲು ತೆಂಗಿನೆಣ್ಣೆ ಸೀಸೆ ತೆಗೆದುಕೊಂಡು ಬಾ, ಇವನ ಮೈಗೆ ತೆಂಗಿನೆಣ್ಣೆ ಹಚ್ಚು" ಎಂದನು.

ಈ ಚಿಕಿತ್ಸೆ ಎರಡುದಿನ ನಡೆದಾಗ, ನೋವು ಕಡಮೆಯಾಯಿತು. ಕೆಂಪು ಬಣ್ಣವು ಹೋಗಿ ಮೊದಲಿನಂತೆಯೇ ಕಪ್ಪಾದ. "ಪುನಃ ಇಟ್ಟಿಗೆ ಚಿಕಿತ್ಸೆ ಮಾಡಬೇಕೆ?" ಎಂದು ಕೇಳಿದಾಗ ಭಾಸ್ಕರನು ನಗುತ್ತ—"ಹೋಗೋ ಹುಚ್ಚ, ಕುಚೋದ್ಯಕ್ಕೆ ನಾನೇನೋ ಹೇಳಿದರೆ ಹಾಗೇ ಮಾಡೋದೇನೊ? ಅಷ್ಟಕ್ಕೂ ನೀನು ಕಪ್ಪಾಗಿದ್ದರೇನಂತೆ? ಮದುವೆಯಾಗಲಾರದೆಂದು ಭಯ ಪಡಬೇಡ. ನನಗೇ ಒಬ್ಬಳು ಮಗಳು ಹುಟ್ಟಿದರೆ ನಿನಗೇ ಕೊಟ್ಟು ಮದುವೆ ಮಾಡುತ್ತೇನೆ!" ಎಂದು ಧೈರ್ಯ ಹೇಳಿದನು.





# ಮಂತ್ರದ ಜಿಂಕೆ

ಪಾಪಯ್ಯಶೆಟ್ಟಿ ದೊಡ್ಡ ವ್ಯಾಪಾರಿ. ಆದರೆ ಪರಮ ಲೋಭಿ. ಕಷ್ಟಪಟ್ಟು ಲಕ್ಷ ಸಂಪಾದಿಸಿದರೂ, ಹುಲ್ಲು ಮನೆಯಲ್ಲಿ ಬಡವನಂತೆಯೇ ಇದ್ದಾನೆ. ಅವನ ಆಸೆಗೆ ಅಂತ್ಯವೇ ಕಾಣಲಿಲ್ಲ. ಇನ್ನೂ ಲಾಭ ಸಂಪಾದಿಸುವ ಉಪಾಯವನ್ನೆ ಸದಾ ಯೋಚನೆ ಮಾಡುತ್ತಿದ್ದ.

ಹೀಗಿರಲು ಒಂದು ದಿನ, ಅವನ ಚಿಕ್ಕಂದಿನ ಗೆಳೆಯ ಕೋದಂಡನು ಆಕಸ್ಮಾತ್ತಾಗಿ ಕಾಣಿಸಿದ. ಇಬ್ಬರೂ ಕುಶಲ ಪ್ರಶ್ನೆಗಳನ್ನು ಮಾಡಿಕೊಂಡರು. ಆಗ ಶೆಟ್ಟಿ—"ಏನು ಹೇಳಲಿ ಗೆಳೆಯ? ಎಲ್ಲಾ ಸಾಮಾನು ಅಗ್ಗವಾಗಿದೆ. ಕೊಂಡುಕೊಳ್ಳುವವರೇ ಇಲ್ಲ. ಲಾಭ ಸೊನ್ನೆ, ದೇಶಕ್ಕೇನಾದರೂ ಕ್ಷಾಮಗೀಮ ಬಂದರೆ ತಾನೇ ವರ್ತಕರಿಗೆ ಲಾಭ?" ಎಂದ.

ಅದಕ್ಕೆ ಕೋದಂಡ–"ಇದೇನು ಮಹಾ? ಇಷ್ಟೊಂದು ಸಣ್ಣ ವಿಷಯಕ್ಕೆ ಇಷ್ಟು ದೊಡ್ಡ ಬಾಧೆಯೇಕೆ? ನಿನಗೆ ನನ್ನ ವಿಷಯ ಗೊತ್ತುಂಟೋ ಇಲ್ಲವೋ? ನಾನು ಮಲಯಾಳ ದೇಶದಲ್ಲಿದ್ದು, ಮಹಾ ಮಹಾ ಮಂತ್ರಗಳನ್ನೆಲ್ಲಾ ಕಲಿತುಕೊಂಡು ಈಗ ತಾನೇ ಬಂದಿದ್ದೇನೆ. ಮಲಯಾಳ ಮಂತ್ರಗಳೆಂದರೇನು ಸಾಮಾನ್ಯವೇ? ನಾವು ಹೇಳಿದಂತೆ ಕೇಳುತ್ತವೆ. ಈಗ ನಿನಗೆ ದೇಶದಲ್ಲಿ ಕ್ಷಾಮ ಬರಮಾಡಬೇಕೊ? ಬರಿ ಈ ದೇಶದಲ್ಲಿ ಮಾತ್ರವಲ್ಲ, ಲೋಕದಲ್ಲೆಲ್ಲಾ ಕ್ಷಾಮ ಬರಬೇಕಾದರೂ ನಾನು ಬರಿಸಬಲ್ಲೆ. ನೋಡುತ್ತಿಯಾ ನನ್ನ ಕರಾಮತಿಯನ್ನು?" ಎಂದನು.

ಪಾಪಯ್ಯ ಕುತೂಹಲದಿಂದ—"ನಿಜವೇ ನಿನ್ನ ಮಾತು? ಈ ದೇಶದಲ್ಲಿ ನೀನು ಕ್ಷಾಮ ಬರಿಸುವಿಯಾದರೆ. ಆಗ ನಾನು ನಿನಗೆ ಲಕ್ಷ ರೂಪಾಯಿ ಕೊಟ್ಟೇನು!" ಎಂದನು.

"ಖಂಡಿತ ತಾನೆ? ಸರಿ. ನೀನು ಇಂದಿನಿಂದಲೇ ಜೀನಸುಗಳನ್ನೆಲ್ಲಾ ಕೊಂಡು ಕೊಂಡು ನಿನ್ನ ಕಣಜದಲ್ಲಿ ಸೇರಿಸಿಕೋ. ಇನ್ನೊಂದು ತಿಂಗಳಲ್ಲಿ ನೋಡು ದೇಶದ ರೀತಿಯನ್ನು! ನಿನ್ನ ಮಾತು ಮಾತ್ರ ಮರೆಯಬೇಡ ಮತ್ತೆ!" ಎಂದು ಕೋದಂಡನು ಹೊರಟು ಹೋದನು.

ಕೋದಂಡನು ಇಪ್ಪತ್ತೊಂದು ದಿನ ದೀಕ್ಷಾಬದ್ಧನಾಗಿ ಕುಳಿತು ಮಂತ್ರವನ್ನು ಜಪಿಸಿದನು.

ಹೊಸಬಾಳೆ ಸೀತಾರಾಮರಾವ್, ಸೊರಬ.



ತರುವಾಯ ಒಂದು ಜಿಂಕೆಯನ್ನು ಸಂಪಾದಿಸಿಕೊಂಡು, ಅದರ ಮೇಲೆ ಮಂತ್ರಪ್ರಯೋಗ ನಡೆಸಿದನು. ಬಳಿಕ ಅದರ ಕೊಂಬಿನ ಎಡೆಯಲ್ಲಿ ಒಂದು ತಾಯಿತವನ್ನು ಕಟ್ಟಿ, ಆ ಜಿಂಕೆಯನ್ನು ಹೊರಕ್ಕೆ ಓಡಿಸಿದನು. ಆ ಜಿಂಕೆ ಸಿಕ್ಕಸಿಕ್ಕಲ್ಲೆಲ್ಲಾ ತಿರುಗಾಡಿತು. ಅದು ಮೆಟ್ಟಿದ ಜಾಗೆಯಲ್ಲೆಲ್ಲಾ ಇದ್ದ ಹುಲ್ಲು ಒಣಗುತ್ತಿತ್ತು. ಅದರ ಗಾಳಿ ತಾಕಿದಲ್ಲಿ ಇರುವ ನೀರು ಬತ್ತುತ್ತಿತ್ತು. ಹೀಗೆ ಅದು ಮೂರು ವರ್ಷದ ವರೆಗೆ ಯಾರ ಕೈಗೂ ಸಿಕ್ಕದೆ ಊರೂರು ತಿರುಗಿತು. ಆಗ ದೇಶವೇ ಕ್ಷಾಮದಿಂದ ಒಣಗ ತೊಡಗಿತು. ಪ್ರಜೆಗಳು ಹಸಿವೆಯಿಂದ ಗೋಳಿಡಲಾರಂಭಿಸಿದರು. ಮಳೆಯೇ ಇಲ್ಲ.

ಹಗಲೆಲ್ಲಾ ಆ ಜಿಂಕೆ ಸ್ವೇಚ್ಛೆಯಾಗಿ ತಿರುಗಿ ರಾತ್ರಿಯಲ್ಲಿ ಅದು ಕೋದಂಡನ ಮನೆಯ ಬಳಿಗೆ ಬಂದು ಸೇರುತ್ತಿತ್ತು. ಅಲ್ಲಿ ಒಂದು ಮೂಲೆಯಲ್ಲಿಯೇ ಅದರ ವಿಶ್ರಾಂತಿ. ಇದು ಕೋದಂಡನಿಗೆ ಗೊತ್ತಿರಲಿಲ್ಲ. ಮಂತ್ರದಿಂದ ದೇಶವನ್ನು ಕ್ಷಾಮದಿಂದ ಬಾಡಿಸಿ, ಪಾಪಯ್ಯ ಶೆಟ್ಟಿಯಿಂದ ಲಕ್ಷಾರ್ಜನೆ ಮಾಡಿಸಿಕೊಂಡಿದ್ದ ಕೋದಂಡನನ್ನು, ನಿತ್ಯವೂ ದಾರಿದ್ರ್ಯವೇ ಕಾಡುತ್ತಿತ್ತು. ಒಮ್ಮೆ ಕಳ್ಳರು ಹೊಕ್ಕರು; ಮತ್ತೊಮ್ಮೆ ರೋಗಗಳ ಕಾಟ; ಮಗದೊಮ್ಮೆ ಏನೋ ಭೂತ ಪಿಶಾಚಿಗಳ ಬಾಧೆ. ಹಾಗೂ ಹೀಗೂ ಮಂತ್ರವಾದಿ ಕೋದಂಡನಿಗೆ ಸುಖವೂ ಇಲ್ಲ, ನೆಮ್ಮದಿಯೂ ಇಲ್ಲ. ಮಂಚ ಹಿಡಿದನು. ಅವನ ಹೆಂಡತಿಯೂ ಮರುಗಿದಳು. ಮಂತ್ರವಾದಿ ಇದರ ಕಾರಣವನ್ನು ಹುಡುಕುತ್ತಿದ್ದನು.

ಒಂದು ದಿನ ರಾತ್ರಿ ಹೊರಗೆ ಏನೋ ಸದ್ದು ಕೇಳಿ, ಕೋದಂಡನು ಅಲ್ಲಿಗೆ ಹೋಗಿನೋಡಿದನು. ತಾನು ಮಂತ್ರಿಸಿ ಬಿಟ್ಟ ಜಿಂಕೆ ಅಲ್ಲಿರುವುದನ್ನು ಕಂಡು "ಹಾ!" ಎಂದನು ಕೋಪದಿಂದ ಕಿಡಿಕಿಡಿಯಾದನು. "ಓಹೋ! ನನ್ನ ಈ ಕಾಟಕ್ಕೆ ಈ ಪೀಡೆಯೇ ಕಾರಣ! ಇದು ಇಲ್ಲಿಯೇ ಬಂದು ಮಲಗುವುದೇ! ಹಾಳು ಬಡವಾ!" ಎನ್ನುತ್ತಾ ಮೂಲೆಯಲ್ಲಿದ್ದ ದೊಣ್ಣೆಯನ್ನೆತ್ತಿಕೊಂಡು, ಅದರ ಕೊಂಬನ್ನು ಹಿಡಿದು ಅತ್ತಿತ್ತ ಎಳೆದಾಡುತ್ತ, ಚೆನ್ನಾಗಿ ಹೊಡೆದು "ಇನ್ನು ಬಂದರೆ ಕೊಂದುಹಾಕುವೆನು!" ಎಂದು ಕೂಗಿ ದೂಡಿಬಿಟ್ಟನು. ಜಿಂಕೆ ಬಾಧೆ ಪಡುತ್ತಾ ಓಡಿಹೋಯಿತು. ಕೋದಂ

ಷನು ಅದರ ಕೊಂಬನ್ನು ಹಿಡಿದು ಎಳೆದಾಡಿದಾಗ, ಕೊಂಬಿಗೆ ಕಟ್ಟಿದ್ದ ತಾಯತ್ತಿನ ಸರಿಗೆ ತುಂಡಾದುದು ಅವನಿಗೆ ಗೊತ್ತಾಗಲಿಲ್ಲ. ತಾಯತ್ತು ತಂತು ಮಾತ್ರ ಕೊಂಬಿನಲ್ಲಿ ಸಿಕ್ಕಿಕೊಂಡಿತ್ತು!

ಆಗ ಮಧ್ಯರಾತ್ರಿಯ ಸಮಯ. ರಾಜನೂ ಮಂತ್ರಿಯೂ ಮಾರು ವೇಷವನ್ನು ಧರಿಸಿಕೊಂಡು ಊರೊಳಗೆ ಅಲ್ಲಲ್ಲಿ ಸುತ್ತಾಡುತ್ತಿದ್ದರು. ದೇಶವನ್ನು ಬಾಧಿಸುವ ಘೋರವಾದ ಆ ಕ್ಷಾಮವನ್ನು ನೋಡಿ ಅವರಿಬ್ಬರೂ ತುಂಬಾ ವಿಚಾರಮಗ್ನರಾಗಿದ್ದರು. ಈ ಕ್ಷಾಮವನ್ನು ಕುರಿತು ಜನರು ವಿಧವಿಧವಾಗಿ ಮಾತಾಡಿಕೊಳ್ಳುತ್ತಿದ್ದರು. ಆದರೂ ರಾಜನು ತುಂಬಾ ಒಳ್ಳೆಯವನಾದುದರಿಂದ ಅವನನ್ನು ಯಾರೂ ದೂರುತ್ತಿರಲಿಲ್ಲ. "ಅಯ್ಯೋ! ನಮ್ಮ ರಾಜನು ಧರ್ಮ ಪ್ರಭುವಾಗಿರುವನು. ನಮ್ಮೆಲ್ಲರನ್ನೂ ತನ್ನ ಹೊಟ್ಟೆಯ ಮಕ್ಕಳಂತೆ ನೋಡಿಕೊಳ್ಳುತ್ತಿದ್ದಾನೆ. ಹಾಗಿದ್ದೂ ಈ ಕ್ಷಾಮವೇಕೆ ಬಂತೊ? ದೇವರಿಗೇನು ಸಿಟ್ಟೋ? ಅಲ್ಲ ಯಾರ ಪಾಪ ಕಾರ್ಯವೋ! ಇದಕ್ಕೆ ಯಾವಾಗ ವಿಮೋಚನೆಯೋ!" ಎಂದು ಒಂದು ಗುಡಿಸಲಿನೊಳಗೆ ಮಾತಾಡುವುದನ್ನು ರಾಜನೇ ಕಿವಿಯಾರೆ ಕೇಳಿದನು. ಅವನಿಗೆ ಬಹಳ ವ್ಯಸನವಾಯಿತು. "ಪ್ರಜೆಗಳ ಬಾಧೆಯನ್ನು ನಿವಾರಿಸಲು ನಾನೇನು ಮಾಡಲಿ ದೇವರೇ!" ಎಂದುಕೊಳ್ಳುತ್ತ ನಿಶ್ಚೇಷ್ಟಿತನಾಗಿ ನಿಂತನು. ಮಂತ್ರಿಯೂ ತುಂಬ ಖಿನ್ನನಾದನು.



ಅವರು ನಿಂತ ಸ್ಥಳವು ಒಂದು ಇಕ್ಕಟ್ಟಾದ ದಾರಿ. ಸುತ್ತೂ ಕಗ್ಗತ್ತಲೆ. ಯಾವುದೋ ಒಂದು ಪ್ರಾಣಿ ಓಡಿ ಬರುವ ಸದ್ದು ಕೇಳಿತು. ಅದು ಮಿಂಚಿನಂತೆ ಬಂದು ಅರಸುಮಂತ್ರಿಗಳ ಕಾಲುಗಳಿಗೆ ತಾಗಿ ಕೊಂಡು ಓಡಿಯೇ ಹೋಯಿತು. ಆಗ ರಾಜನ ಕಾಲಿನ ಮೇಲೆ ಬಿದ್ದ ಏನೋ ಒಂದು ವಸ್ತುವನ್ನು ರಾಜನು ಕೈಗೆತ್ತಿಕೊಂಡನು. ಇಬ್ಬರೂ ತುಸು ಆಚೆಗೆ ಹೋಗಿ ಬೀದಿಯ ದೀಪದ ಬೆಳಕಿನಲ್ಲಿ ನೋಡಿದಾಗ ಅದೊಂದು ಜಗ್ಗಿಹೋದ ತಾಯತ್ತು! ಕೂಡಲೇ ಅದನ್ನು ಒಡೆದು ನೋಡಿದಾಗ, ಅದರೊಳಗೆ ಒಂದು ಚೀಟಿಯಿತ್ತು. ಅದರಲ್ಲಿ—" ಈ ಚೀಟಿಯನ್ನು ಬಾವಿಯೊಳಗೆ ಹಾಕಿದರೆ ದೇಶಕ್ಕೆ ಬಂದ ಕ್ಷಾಮವು ಕೂಡಲೇ ನಿವಾರಣೆಯಾಗವುದು." ಎಂದಿತ್ತು.



ರಾಜನಿಗಾದ ಆನಂದಕ್ಕೂ ಆಶ್ಚರ್ಯಕ್ಕೂ ಪಾರವಿಲ್ಲ. ಇಬ್ಬರೂ ಬಳಿಯಲ್ಲಿದ್ದೊಂದು ಬಾವಿಯ ಬಳಿಗೆ ಹೋಗಿ ಆ ಚೀಟಿಯನ್ನು ಅದರೊಳಗೆ ಹಾಕಿದರು.

ತತ್ ಕ್ಷಣವೇ ಅದೇನಾಶ್ಚರ್ಯವೋ! ಆಕಾಶದ ನಾಲ್ಕೂ ಸುತ್ತೂ ಮೇಘಗಳು ಮುಚ್ಚಿಕೊಂಡು ಬಂದುವು. ಆಕಾಶವೇ ಜರಿದು ಬೀಳುವಂತೆ ಮಳೆ ಸುರಿಯಲಾರಂಭಿಸಿತು. ಈ ಅದ್ಭುತವನ್ನು ನೋಡಿ ಯಾರಿಗೆ ತಾನೇ ಆಶ್ಚರ್ಯವಾಗದು? ಮೂರು ವರ್ಷದ ಮಳೆಯೂ ಒಂದೇ ಬಾರಿ ಬರುವಂತೆ ಜಡಿ ಮಳೆ ಸುರಿಯುತ್ತಿತ್ತು.

ಅರಸನಿಗೂ ಮಂತ್ರಿಗೂ ಆನಂದಾಶ್ಚರ್ಯಗಳಾದರೂ, ಭಯಂಕರ ಮಳೆಯಲ್ಲಿ ಸಿಕ್ಕಿಬಿದ್ದು ಪೇಚಾಡಿ ಹೋದರು. ಆ ಮಳೆಯಲ್ಲಿಯೂ ಚಳಿಯಲ್ಲಿಯೂ ಉಳಿಯಲಾರದೆ, ಯಾವುದೋ ಒಂದು ಹುಲ್ಲು ಮನೆಯ ಬಾಗಿಲನ್ನು ತಟ್ಟಿದರು. ಆ ಮನೆಯಲ್ಲಿದ್ದ ಒಬ್ಬಳೇ ಹೆಂಗಸು, ಈ ಕಷ್ಟಾರ್ತರಿಗೆ ಆಶ್ರಯವನ್ನಿತ್ತಳು. ಒಳ್ಳೆಯ ಒಣಬಟ್ಟೆಗಳನ್ನು ಕೊಟ್ಟಳು. ಬಿಸಿಬಿಸಿ ಗಂಜಿಯನ್ನೂ ಉಪ್ಪಿನಕಾಯಿಯನ್ನೂ ಬಡಿಸಿ ಉಪಚಾರ ಮಾಡಿದಳು. ಅವಳು ಗಂಡನಿಗಾಗಿ ಕಾದಿರುವಳೆಂದೂ, ಗಂಡನು ಅಂಗಡಿ ವ್ಯಾಪಾರ ಮುಗಿಸಿ ಮನೆಗೆ ಬರುವಾಗ ಮಧ್ಯರಾತ್ರಿ ಕಳೆದುಹೋಗುವುದೂ ಉಂಟೆಂದೂ ತಿಳಿದು ಬಂತು.

ಅಷ್ಟರಲ್ಲಿ ಮಳೆ ನಿಂತಿತು, ಆ ಹೆಂಗುಸಿಗೆ ತುಂಬಾ ಕೃತಜ್ಞತೆಯನ್ನು ಹೇಳಿ ಅರಸು ಮಂತ್ರಿಗಳು ಹೊರಟು ಹೋದರು.

ಮುಂಜಾನೆ ಏಳುತ್ತಲೇ ಅರಸನು ರಾತ್ರಿಯ ಗೂಢಾಚಾರರನ್ನು ಬರಮಾಡಿ ಸಮಾಚಾರ ಕೇಳುವ ಪದ್ಧತಿಯಿತ್ತು. ಆ ಪ್ರಕಾರ ಒಬ್ಬ ಗೂಢಚಾರನು ಅರಸನನ್ನು ಕುರಿತು ಹೀಗೆಂದ—" ಪ್ರಭು! ರಾತ್ರಿ ಅದ್ಭುತವಾದ ಮಳೆ ಬಂದಂತೆಯೇ, ಒಂದು ವಿಚಿತ್ರ ಸಮಾಚಾರವನ್ನು ಕೇಳಿದೆ: ಒಂದು ಹುಲ್ಲು ಮನೆಯಲ್ಲಿ, ಒಬ್ಬ ವರ್ತಕನಿಗೂ ಅವನ ಹೆಂಡತಿಗೂ ಜಗಳವಾಗುತ್ತಿತ್ತು. ಅವನಿಗಾಗಿ ಇಟ್ಟಿದ್ದ ಗಂಜಿಯನ್ನು ಅವಳು ಯಾರೋ ಕಷ್ಟದಲ್ಲಿ ಬಿದ್ದ ಪ್ರಯಾಣಿಕರಿಗೆ ಹಾಕಿ ಕಳಿಹಿಸಿದಳಂತೆ. ಅದನ್ನು ಕೇಳಿ ಆ ವರ್ತಕ—' ನಾನು ಲಕ್ಷ ರೂಪಾಯಿ ಖರ್ಚು ಮಾಡಿ ದೇಶದಲ್ಲಿ

ಕ್ಷಾಮವುಂಟು ಮಾಡಿಸಿ, ಲಾಭ ಗಳಿಸುತ್ತಿದ್ದರೆ ನೀನು ಈ ದಿನ ದಾನ ಧರ್ಮ ಮಾಡಲು ಪ್ರಾರಂಭಿಸಿದಿಯಾ? ಥಕ್ಕನೆ ಏಕೆ ಹೀಗೆ ಮಳೆ ಬರುತ್ತೋ ಅಂದುಕೊಂಡೆ. ನೀನು ಯಾರೋ ದಾರೀ ಹೋಕರಿಗೆ ಗಂಜಿ ಹೊಯಿದುದರಿಂದಲೇ ಹೀಗೆ ಮಳೆ ಬಂತು! ಇನ್ನು ಕ್ಷಾಮ ಹೋಗುತ್ತೆ, ಅಮೇಲೆ ನಾನು ಲಾಭಗಳಿಸುವುದೇನು ಮಣ್ಣು?' ಎನ್ನುತ್ತಾ ಆ ವರ್ತಕನು ತನ್ನ ಹೆಂಡತಿಯನ್ನು ಚೆನ್ನಾಗಿ ಹೊಡೆದನು. ಈ ಕ್ಷಾಮಕ್ಕೂ ಆ ವರ್ತಕನಿಗೂ ಏನೋ ಸಂಬಂಧವಿರಬೇಕೆಂದುಕೊಂಡು, ನಾನು ಈ ವಾರ್ತೆಯನ್ನು ತಂದಿದ್ದೇನೆ" ಎಂದನು.

ಇದನ್ನು ಕೇಳಿ ರಾಜನು ಸೋಜಿಗ ಪಡುತ್ತ ಆ ವರ್ತಕನನ್ನು ರಾಜ ಸಭೆಗೆ ಬರಮಾಡಿಕೊಂಡನು. ಆ ವರ್ತಕ ಬೇರೆ ಯಾರೂ ಅಲ್ಲ; ನಮ್ಮ ಪಾಪಯ್ಯ ಶೆಟ್ಟಿಯೇ.

ಅರಸನು ಅವನನ್ನು ಕುರಿತು—"ಓ ಶೆಟ್ಟಿ! ದೇಶಕ್ಕೆ ಕ್ಷಾಮ ಬರುವಂತೆ ಮಾಡಿದವನು ನೀನೇ ಎಂದು ನಮಗೆ ತಿಳಿದು ಬಂತು. ನೀನು ಯಾವ ಪ್ರಾಣಿಗೆ ತಾಯತ್ತನ್ನು ಕಟ್ಟಿದ್ದಿ? ಕ್ಷಾಮ ನಿವಾರಣಗೆ ತಕ್ಕ ಉಪಾಯವನ್ನು ಆ ತಾಯತ್ತಿನೊಳಗೆ ಇಡಬೇಕೆಂಬ ಒಳ್ಳೆಯ ಬುದ್ಧಿ ನಿನಗೆ ಹೇಗೆ ಬಂತು?" ಎಂದು ಕೇಳಿದನು.

"ಏನೋ ನಡೆದಿದೆ" ಎಂದು ಶೆಟ್ಟಿಗೆ ತುಂಬಾ ಭಯವಾಯಿತು. "ಅದು ನಾನಲ್ಲ. ಕೋದಂಡ ಮಂತ್ರವಾದಿ-" ಎಂದು ಪಾಪಯ್ಯ



ಸತ್ಯ ಸಂಗತಿಯನ್ನೆಲ್ಲಾ ಹೇಳಿಕೊಂಡು, ದೊರೆಯ ಪಾದದ ಮೇಲೆ ಬಿದ್ದನು.

ಸ್ವಾರ್ಥಕ್ಕಾಗಿ ದೇಶವನ್ನೆ ಹಾಳು ಮಾಡಿದ ಈ ಘೋರ ಪಾಪಿಗೆ ಯೋಗ್ಯ ಶಿಕ್ಷೆಯನ್ನು ವಿಧಿಸಬೇಕೆಂದುಕೊಂಡು. ಅರಸನು ಅವನನ್ನು ಬಂದೀಖಾನೆಯಲ್ಲಿರಿಸಿದನು. ಈ ಸುದ್ದಿ ಊರೆಲ್ಲಾ ಹರಡಿತು.

ಆದರೆ ರಾಜನು ಆ ಪಾಪಯ್ಯಶೆಟ್ಟಿಯನ್ನು ಕ್ಷಮಿಸಲೇಬೇಕಾಗಿ ಬಂದಿತು. ಅವನ ಗತಿಯನ್ನು ತಿಳಿದು ಅವನ ಪತ್ನಿ ಓಡಿ ಬಂದು ಅರಸನ ಪಾದದಲ್ಲಿ ಬಿದ್ದು, "ನನ್ನ ಪತಿಯನ್ನು ಕ್ಷಮಿಸಬೇಕು. ಇನ್ನು ಮೇಲೆ ಅವರು ಹಾಗೆ ಮಾಡದಂತೆ ನಾನು ನೋಡಿಕೊಳ್ಳುತ್ತೇನೆ" ಎಂದು ಪ್ರಾರ್ಥಿಸಿಕೊಂಡಳು. ರಾಜನಿಗೆ ಅವಳ ಸ್ವರದ ಗುರುತು ಹತ್ತಿತು.

ಅವಳು ದೊರೆಗೂ ಮಂತ್ರಿಗೂ, ಆ ರಾತ್ರಿಯಲ್ಲಿ, ಒಳ್ಳೆ ಬಟ್ಟೆಗಳನ್ನು ಕೊಟ್ಟು, ಬಿಸಿ ಗಂಜಿಯನ್ನು ಕುಡಿಸಿ ಆದರಿಸಿದ ಹೆಂಗುಸಾಗಿದ್ದಳು! ಅಂತಹ ಕಠಿನ ಶೆಟ್ಟಿಗೆ ಇಂತಹ ಒಳ್ಳೆಯ ಹೆಂಡತಿಯೇ! ರಾಜನು ಯೋಚಿಸಿದನು: ಅವಳು ಗಂಜಿಯನ್ನು ತಮಗೆ ದಾನ ಮಾಡಿದುದರಿಂದಲೇ ಶೆಟ್ಟಿಗೆ ಕೋಪ ಬಂದು ಹಾಗೆಲ್ಲಾ ಬೈದ. ಅದನ್ನು ಗೂಢಚಾರನು ಕೇಳಿ, ಶೆಟ್ಟಿ ಸಿಕ್ಕಿಬೀಳುವಂತಾಯಿತು. ಹೀಗೆ ನೆನೆದು ರಾಜನು ಪಾಪಯ್ಯ ಶೆಟ್ಟಿಯನ್ನು ತುಂಬಾ ಬುದ್ಧಿ ಹೇಳಿ ಕ್ಷಮಿಸಿ, ಆ ಪುಣ್ಯಸ್ತ್ರೀಯೊಂದಿಗೆ ಮನೆಗೆ ಕಳುಹಿಸಿದನು. ಆದರೆ ಯಾವಾಗಲೂ ಪಾಪಯ್ಯ ಶೆಟ್ಟಿಯ ಮನೆಗೆ ರಾಜಭಟರ ಕಾವಲಾಯಿತು!

ಭಯಂಕರ ಮಂತ್ರವಾದಿಯಾದ ಕೋದಂಡನನ್ನು ಹಿಡಿದುಕೊಂಡು ಬರುವಂತೆಯೂ ರಾಜನು ಚಾರರನ್ನು ಕಳುಹಿಸಿದನು. ಆದರೆ ಆ ಕೋದಂಡನ ಗತಿ ಏನಾಯಿತು ಗೊತ್ತೇ? ಅವನು ಆ ಜಿಂಕೆಯನ್ನು ಹೊಡೆದು ಕಳುಹಿಸಿದ ಮೇಲೂ ಅವನಿಗೆ ಸಮಾಧಾನವಿರಲಿಲ್ಲ. ಕೋಪದಿಂದ ಕುರುಡಾಗಿ, ಕತ್ತಲೆಯಲ್ಲಿ ಕಾಣದೆ ಆ ಜಿಂಕೆಯ ಮೈಗೆ ಎಲ್ಲೆಂದರಲ್ಲಿ ಹೊಡೆದುದನ್ನು ಯೋಚನೆ ಮಾಡಿದಂತೆ ಅವನಿಗೆ ನಡುಕ ಬಂದಿತು. ತನ್ನ ಪೆಟ್ಟಿನಿಂದ ಅದರ ಕಾಲು ಗೀಲು ಮುರಿದು, ಆ ಜಿಂಕೆ ಎಲ್ಲಿಯಾದರೂ ಬಿದ್ದುಗಿದ್ದು ಸತ್ತರೆ, ಕ್ಷಾಮವು ೧೨ ವರ್ಷ ಹೀಗೇ ಉಳಿಯುವುದಲ್ಲಾ! ತನಗೇನೂ ಲಾಭವಿಲ್ಲದೆ, ತಾನು ಘೋರ ಪಾಪಕ್ಕೆಮಾತ್ರ ಗುರಿಯಾದೆನಲ್ಲಾ!–ಎಂದು ಪಶ್ಚಾತ್ತಾಪ ಪಡುತ್ತ, ಭಯದಿಂದಲೂ ಮನೋಬಾಧೆಯಿಂದಲೂ ತೀರ ಬಲಹೀನನಾಗಿ ಹಾಸಿಗೆಯಲ್ಲಿ ಬಿದ್ದುಬಿಟ್ಟಿದ್ದ. ಅವನ ಹೆಂಡತಿ ಗಾಬರಿಯಾದಳು. "ಜಿಂಕೆ! ಮಂತ್ರ! ತಾಯಿತ್ತು!—" ಎಂದು ಅವನು ಬಡಬಡಿಸ ತೊಡಗಿದನು. ಅಷ್ಟರಲ್ಲಿ ಅಕಸ್ಮಾತ್ತಾಗಿ ಭಯಂಕರ ಮಳೆಯೂ ಬಂತು. ಅದರಿಂದ ಕೋದಂಡನಿಗೆ ತನ್ನ ಗುಟ್ಟು ಬಯಲಾಗುವುದೇನೋ ಎಂಬ ಹೊಸ ದಿಗಿಲೂ ಸೇರಿಕೊಂಡಿತು. ಕಡೆಗೆ ರಾಜಭಟರನ್ನು ಕಾಣುತ್ತಲೇ ಯಮದೂತರನ್ನು ನೋಡಿದಂತಾಯಿತು. ಎದೆಯೊಡೆದು ಸತ್ತು ಬಿದ್ದನು!






ಅನೇಕ ವರ್ಷಗಳ ಹಿಂದೆ ಶುಭ್ರಾವತಿ ದೇಶದಲ್ಲಿ ಭದ್ರವೀರನೆಂಬ ರೈತನಿದ್ದ. ಅವನಿಗೆ ಇಬ್ಬರು ಹೆಂಡಿರು. ಮೊದಲನೆಯವಳಿಗೆ ಹತ್ತು ಮಂದಿ ಮಕ್ಕಳು. ಎರಡನೆಯವಳಿಗೆ ಇಬ್ಬರೇ ಮಕ್ಕಳು. ಹಿರಿಯನ ಹೆಸರು ಗುಣಾಢ್ಯ; ಕಿರಿಯನ ಹೆಸರು ಮಂಜುಳಾಂಗ. ಭದ್ರವೀರನಿಗೆ ಈ ಇಬ್ಬರು ಮಕ್ಕಳ ಮೇಲೆ ಹೆಚ್ಚಿಗೆ ಮಮತೆ.

ಗುಣಾಢ್ಯನಿಗೆ ಹದಿನಾರು ವರ್ಷ ಪ್ರಾಯವಾಗಿತ್ತು. ಹೆಸರಿಗೆ ತಕ್ಕಂತೆ ಗುಣಾಢ್ಯನೇ ಆಗಿದ್ದ. ಅಣ್ಣಂದಿರ ಮೇಲೆ ಅವನಿಗೆ ತುಂಬಾ ಗೌರವ. ಆದರೆ ಅವರಿಗೆ ಮಾತ್ರ ಗುಣಾಢ್ಯನ ಮೇಲೆ ತುಂಬಾ ಮತ್ಸರ.

ಒಂದು ದಿವಸ ಗುಣಾಢ್ಯನಿಗೆ ಒಂದು ಸುಖ ಸ್ವಪ್ನವು ಬಿತ್ತು. ಅದನ್ನು ಕುರಿತು ಅವನು ಬಹಳ ಉತ್ಸಾಹದಿಂದ ಅಣ್ಣಂದಿರೊಡನೆ ಹೇಳಿದ. ಅದನ್ನು ಕೇಳಿ ಅವರೆಲ್ಲಾ ಅವನ ಮೇಲೆ ಬಹಳ ತೀವ್ರವಾದ ಹಗೆ ತೊಟ್ಟರು. ಇದು ಸರಳ ಸ್ವಭಾವದ ಗುಣಾಢ್ಯನಿಗೆ ಗೊತ್ತಾಗಲಿಲ್ಲ.

ಹೀಗಿರಲು, ಭದ್ರವೀರನ ಹುಲ್ಲುಗಾವಲಿನ ಹುಲ್ಲೆಲ್ಲಾ ತೀರಿಹೋಯಿತು. ಅವನು ತನ್ನ ಹಿರಿಯ ಹತ್ತು ಮಕ್ಕಳನ್ನು ಕರೆದ:—"ದನಗಳನ್ನೆಲ್ಲಾ ಇನ್ನೊಂದು ಮೈದಾನಕ್ಕೆ ಹೊಡೆದುಕೊಂಡುಹೋಗಿ ಮೇಯಿಸಿರಿ. ನೀವು ಯಾವ ಮೈದಾನದಲ್ಲಿದ್ದೀರೋ ಅಲ್ಲಿನ ಹುಲ್ಲುಗಾವಲು ಹೇಗಿದೆಯೋ ಎಂದು ನಿಮ್ಮಲ್ಲೊಬ್ಬನು ಬಂದು ನನಗೆ ತಿಳಿಸಲಿ" ಎಂದು ಹೇಳಿ ಕಳುಹಿಸಿದನು. ಅವರು ಹತ್ತುಮಂದಿಯೂ ಹಾಗೆಯೇ ಹೋಗಿ ಒಂದು ಹೊಸ ಹುಲ್ಲುಗಾವಲನ್ನು ಆರಿಸಿ, ಅಲ್ಲಿ ಪಶುಗಳನ್ನು ಮೇಯಬಿಟ್ಟು ಮೈದಾನವಲ್ಲಿ ವಿಶ್ರಮಿಸಿದರು. ಆದರೆ ತಂದೆಗೆ ಸುದ್ದಿಯನ್ನೇ ಕಳುಹಿಸಲಿಲ್ಲ. ಕಡೆಗೆ ಭದ್ರವೀರನು ಗುಣಾಢ್ಯನನ್ನು ಕರೆದು "ನಿನ್ನ ಅಣ್ಣಂದಿರು ಎಲ್ಲಿದ್ದಾರೋ ಏನು ಮಾಡುತ್ತಿದ್ದಾರೋ ನೋಡಿ ಬಾ" ಎಂದು ಹೇಳಿ ಕಳುಹಿಸಿದನು.

ಗುಣಾಢ್ಯನು ಅಣ್ಣಂದಿರನ್ನುಹುಡುಕುತ್ತಾ ಅವರಿದ್ದಲ್ಲಿಗೆ ಹೋದನು. ಕೂಡಲೇ ಅವರೆಲ್ಲಾ ಇವನನ್ನು ಮುತ್ತಿ "ಏನೋ ಬಂದಿ? ಹೊಸ

ಟಿ. ಎಲ್. ಕುವೆಲೋ, ಮಂಗಳೂರು



ಸ್ವಪ್ನವೇನಾದರೂ ಬಿತ್ತೆ? ನಮಗೂ ಒಂದು ಸ್ವಪ್ನ ಬಿತ್ತು. ಅಡುಗೇ ಮನೆಗೆ ಒಂದು ಮೊಲ ಬಂತು. ನೀನು ಹೆದರಿ ನಮ್ಮ ಹತ್ತಿರ ಓಡಿ ಬಂದಿ. ನಾವು ನಿನ್ನನ್ನು ಹಿಡಿದು ಕಟ್ಟಿ, ನಾಳೆ ಬೆಳಗಾಗುವುದರೊಳಗೆ ಕೊಂದು ಬಿಟ್ಟಿದ್ದೇವಂತೆ?' ಎಂದು ಹೇಳುತ್ತಾ ಬಲಾತ್ಕಾರದಿಂದ ಅವನನ್ನು ಕಟ್ಟಿ ಹೊತ್ತುಕೊಂಡು ನಡೆದರು.

ಅವನನ್ನು ಹೇಗೆ ಕೊಲ್ಲುವುದೆಂದು ಅವರು ಚರ್ಚಿಸಿಕೊಳ್ಳುತ್ತಿದ್ದರು. ಆಗ ಗುಲಾಮ ವ್ಯಾಪಾರಿಗಳು ಕೆಲವರು ಇದಿರಾಗಿ ಬರುತ್ತಿದ್ದರು. ಆ ವರ್ತಕರನ್ನು ನೋಡುತ್ತಲೇ ಇವರಿಗೆ—"ಇವನನ್ನು ಕೊಲ್ಲುವುದರಿಂದೇನು ಲಾಭ? ಮಾರಿಬಿಟ್ಟರೆ ಹಣವಾದರೂ ಸಿಕ್ಕೀತು" ಎಂದು ತೋರಿತು. ಕೂಡಲೇ ಅವರು ಆ ವರ್ತಕರೊಂದಿಗೆ ಮಾತಾಡಿ ಇಪ್ಪತ್ತು ಮೊಹರಾಗಳಿಗೆ ಗುಣಾಢ್ಯನನ್ನು ಮಾರಿಬಿಟ್ಟರು. ವರ್ತಕರು ಗುಣಾಢ್ಯನ ಎರಡು ಕೈಗಳಿಗೂ ಹಗ್ಗ ಕಟ್ಟಿ ಎಳೆದುಕೊಂಡು ಹೋದರು.

ಆ ವರ್ತಕರು ಗುಣಾಢ್ಯನನ್ನು ಮೈನಾಕ ದ್ವೀಪಕ್ಕೆ ಕೊಂಡೊಯ್ದು ಅಲ್ಲಿಯ ಅರಸನಿಗೆ ಅಡಿಯಾಳಾಗಿ ಮಾರಿಬಿಟ್ಟರು.

ಆ ಅರಸನಿಗೆ ಕೂಡಾ ಒಮ್ಮೆ ವಿಚಿತ್ರವಾದೊಂದು ಸ್ವಪ್ನ ಬಿತ್ತು. "ಹಸಿರಾದ ಹುಲ್ಲು ಬಯಲು, ಅದರ ಪಕ್ಕದಲ್ಲಿ ನದಿ. ಆ ನದಿಯಿಂದ ಕ್ರಮವಾಗಿ ಏಳು ಹಸುಗಳು ಮೇಲೆ ಬಂದುವು. ಅವು ಚೆನ್ನಾಗಿ ಬಲಿತು ಪುಷ್ಟಿಯಾಗಿದ್ದುವು. ಮತ್ತೆ ಕೊಂಚ ಹೊತ್ತಿಗೆಲ್ಲಾ ಅದೇ ನದಿಯಿಂದ ಮತ್ತೆ ಏಳು ಹಸುಗಳು ಮೇಲೆ ಬಂದುವು. ಇವುಗಳೆಲ್ಲಾ ಎಲುಬು ತೊಗಲುಗಳಿಂದ ಒಣಕಲು ದನಗಳಾಗಿದ್ದುವು. ಈ ಸೊರಕಲು ದನಗಳೆಲ್ಲಾ ಸೇರಿ ಪುಷ್ಟಿಯಾದ ಏಳು ದನಗಳನ್ನೂ ನುಂಗಿಬಿಟ್ಟುವು!"— ಇದು ರಾಜನ ಸ್ವಪ್ನ.

ಅರಸನು ಜ್ಯೋತಿಷ್ಕರನ್ನು ಕರೆಸಿ ಸ್ವಪ್ನ ಫಲವನ್ನು ಕೇಳಿದನು. ಎಷ್ಟು ಶಾಸ್ತ್ರಗಳನ್ನು ಹುಡುಕಿದರೂ ಯಾರಿಗೂ ಆ ಸ್ವಪ್ನದ ಅರ್ಥ ಗೊತ್ತಾಗಲಿಲ್ಲ. ಕಡೆಗೆ ನಮ್ಮ ಗುಣಾಢ್ಯನನ್ನು ಕೇಳಿದಾಗ ಅವನೆಂದ: ಪ್ರಭು, ಈ ಸ್ವಪ್ನದ ಮೂಲಕ ದೇವರು ನಮ್ಮ ರಾಜ್ಯದ ಭವಿಷ್ಯವನ್ನು ಸೂಚಿಸಿದ್ದಾನೆ. ಮೊದಲು ಬಂದ

ಏಳು ಪುಷ್ಟಿಯಾದ ದನಗಳು ಏಳು ವರ್ಷಗಳು. ಈ ಏಳು ವರ್ಷಗಳೂ ದೇಶದಲ್ಲಿ ಒಳ್ಳೇ ಪುಷ್ಕಲವಾದ ಫಸಲು ಬೆಳದೀತು. ಅನಂತರದ ಏಳು ಸಂವತ್ಸರಗಳಲ್ಲಿ ದೊಡ್ಡ ಬರಗಾಲ ಬರಲಿದ್ದೀತು. ಮೊದಲು ತೋರಿದ ಪುಷ್ಟಿಯಾದ ಗೋವುಗಳು ಅಂದರೆ ಸುಖ. ಆ ಸುಖವನ್ನೆಲ್ಲಾ ಅನಂತರ ಬಂದ ಕಷ್ಟಗಳು ನುಂಗಿಬಿಡುತ್ತವೆ. ಆದುದರಿಂದ ನಾವು ಜಾಗ್ರತೆಯಿಂದಿರಬೇಕು."

ಇದನ್ನು ಕೇಳಿ ಚಿಂತಿಸುತ್ತಾ ಅರಸನು– "ಗುಣಾಢ್ಯ, ಆ ಜಾಗ್ರತೆ ಅಂದರೆ ಏನೋ ನೀನೇ ಹೇಳಬೇಕು" ಎಂದನು. ಅದಕ್ಕೆ ಗುಣಾಢ್ಯನು, "ದವಸ ಧಾನ್ಯ ಮೊದಲಾದ ಆಹಾರ ಪದಾರ್ಥಗಳನ್ನೆಲ್ಲಾ ಸಾಧ್ಯವಾದಷ್ಟು ಪ್ರಭುತ್ವದ ಕಣಜದಲ್ಲಿ ಶೇಖರಿಸಬೇಕು. ಸುಖ ಕಾಲದಲ್ಲಿ ಪ್ರಜೆಗಳು ಆ ಆಹಾರ ವಸ್ತುಗಳನ್ನು ವ್ಯರ್ಥ ಮಾಡದಂತೆ ನೋಡಿಕೊಳ್ಳಬೇಕು" ಎಂದು ಕೆಲವು ಮುಖ್ಯವಾದ ಸೂಚನೆಗಳನ್ನೂ ಸೂತ್ರಗಳನ್ನೂ ವಿವರಿಸಿದನು.

ಇವನ ಬುದ್ಧಿವಂತಿಕೆಗೆ ಮೆಚ್ಚಿ ಅರಸನು ಅವನನ್ನು ಗುಲಾಮತನದಿಂದ ಬಿಡಿಸಿ ತನ್ನ ಮುಖ್ಯ ಮಂತ್ರಿಯಾಗಿ ನಿಯಮಿಸಿಕೊಂಡನು. ಮತ್ತು ಬರಗಾಲದ ಬಾಧೆಯಿಂದ ದೇಶವನ್ನು ಕಾಪಾಡುವ ಭಾರವನ್ನು ಕೂಡಾ ಅವನಿಗೇ ವಹಿಸಿಕೊಟ್ಟನು.

ಭವಿಷ್ಯವು ಗುಣಾಢ್ಯನು ಹೇಳಿದಂತೆಯೇ ಜರುಗಿತು. ಮೊದಲು ಅಪರಿಮಿತವಾದ ಬೆಳೆಗಳು ಬೆಳೆದು ತುಂಬಿಹೋದುವು. ಪ್ರಜೆಗಳು




ತಿಂದಷ್ಟೂ ತಿಂದು, ಉಳಿದುದನ್ನು ಹಾಳು ಮಾಡದಂತೆ ಗುಣಾಢ್ಯನು ಬಲು ಜಾಗ್ರತೆ ತೆಗೆದುಕೊಂಡನು. ಪ್ರಜೆಗಳಿಗೆ ಎಷ್ಟುಬೇಕೋ ಅಷ್ಟನ್ನೆ ತಿನ್ನಬಿಟ್ಟು ಮಿಕ್ಕಿದ್ದೆಲ್ಲಾ ಒಂದು ಕಾಳು ಕೂಡಾ ಕಳೆದು ಹೋಗದಂತೆ ಅರಸು ಕಣಜದಲ್ಲಿ ಭದ್ರಗೊಳಿಸಿದನು.

ಹೀಗೆ ಸುಭಿಕ್ಷವಾಗಿ ಏಳು ಸಂವತ್ಸರಗಳು ಕಳೆದು ಹೋದುವು. ಅನಂತರ 'ಬರ' ಪೆಡಂಭೂತವು ತಲೆಹಾಕಿತು. ಮಳೆಯಿಲ್ಲ, ಬೆಳೆಯಿಲ್ಲ. ಹಸಿವೆಯಿಂದ ಪ್ರಜೆಗಳು ಹಾಹಾಕಾರ ಮಾಡಲಾರಂಭಿಸಿದರು. ಗುಣಾಢ್ಯನು ಎಲ್ಲರಿಗೂ ಧೈರ್ಯ ಹೇಳುತ್ತಾ, ಅನೇಕ ವಿಧವಾದ ಸಹಾಯ ಮಾಡುತ್ತಾ ಬಂದನು.

ಈ ಕ್ಷಾಮವು ಸುತ್ತೂ ಮುತ್ತೂ ಇರುವ ಎಲ್ಲಾ ದೇಶಗಳಿಗೂ ವ್ಯಾಪಿಸಲಾರಂಭಿಸಿತು.





ಆದರೆ ಬೇರೆ ದೇಶದವರಾರೂ ಮುಂಜಾಗ್ರತೆ ವಹಿಸಿಕೊಂಡಿರಲಿಲ್ಲ. ಆದ್ದರಿಂದ ಅಲ್ಲಿಯ ಹಾಹಾಕಾರ ಹೇಳಿತೀರದು. ಕ್ರಮೇಣ ಮೈನಾಕ ದ್ವೀಪದಲ್ಲಿ ದವಸಧಾನ್ಯಗಳು ತುಂಬಾ ಸಂಗ್ರಹವಿವೆ ಎಂದು ತಿಳಿದುಬಂತು. ಬೇರೆದೇಶದವರುಕೂಡಾ ಆ ದೇಶಕ್ಕೆ ಹೋಗಿ ಗುಣಾಢ್ಯನನ್ನು ಬೇಡತೊಡಗಿದರು. ಯಾರಿಗೂ ಇಲ್ಲವೆನ್ನದೆ ದಾನಮಾಡಲು ಗುಣಾಢ್ಯನು ಶಕ್ತನಾಗಿಯೇ ಇದ್ದನು.

ಗುಣಾಢ್ಯನ ಜನ್ಮಭೂಮಿಯಾದ ಶುಭ್ರಾವತೀದೇಶದಿಂದಕೂಡಾ ಪ್ರಜೆಗಳು ಸಂಚಿಗಳೊಂದಿಗೇ ಮೈನಾಕ ದ್ವೀಪಕ್ಕೆ ಬರಲಾರಂಭಿಸಿದರು. ಆ ಬಂದವರಲ್ಲಿ ಗುಣಾಢ್ಯನ ಅಣ್ಣಂದಿರುಕೂಡಾ ಇದ್ದರು. ಬರಗಾಲವು ಅವರನ್ನು ಮಾತ್ರ ಬಿಟ್ಟುಹೋಗುತ್ತೆಯೆ? ಭದ್ರವೀರನೆ ಅವರನ್ನು ಕಳುಹಿಸಿದ್ದ. ಆದರೆ ಕಿರೀ ಮಗನಾದ ಮಂಜುಲಾಂಗನನ್ನು ಮಾತ್ರ ಕಳುಹಿಸಲಿಲ್ಲ. ಗುಣಾಢ್ಯನು ಸತ್ತುಹೋದನೆಂದೇ ಹಿರಿಯಮಕ್ಕಳು ಸುದ್ದಿಹುಟ್ಟಿಸಿದ್ದರು. ಅದರಿಂದ ದುಃಖಮಗ್ನನಾದ ಭದ್ರವೀರನು ಮಂಜುಲಾಂಗನನ್ನುಮಾತ್ರ ಒಂದು ನಿಮಿಷ ಕೂಡಾ ಅಗಲಲಾರದೇ ಇದ್ದನು.

ಮಂತ್ರಿಯ ವೇಷದಲ್ಲಿರುವ ಗುಣಾಢ್ಯನ ಗುರುತು ಅವನ ಅಣ್ಣಂದಿರಿಗೆ ತಿಳಿಯಲೇ ಇಲ್ಲ. ತಾವು ಗುಲಾಮತನಕ್ಕೆ ಮಾರಿದವನು ಇಷ್ಟೊತ್ತಿಗೆ ಸತ್ತಿದ್ದಾನು ಎಂದೇ ಅವರ ತಿಳುವಳಿಕೆ. ಗುಣಾಢ್ಯನಿಗೆ ಮಾತ್ರ ಅಣ್ಣಂದಿರ ಗುರುತು ತಿಳಿದುಹೋಯಿತು. ಅವರು ಹತ್ತು ಮಂದಿಯೂ ಕಲೆತು "ಮಹಾಪ್ರಭು! ಕಾಳಿಲ್ಲದೆ ಸತ್ತುಹೋಗುತ್ತಿದ್ದೇವೆ. ಧಾನ್ಯಕೊಟ್ಟು ನಮ್ಮಪ್ರಾಣಗಳನ್ನು ಕಾಪಾಡಿರಿ!" ಎಂದು ಗುಣಾಢ್ಯನಿಗೆ ಸಾಷ್ಟಾಂಗ ಅಡ್ಡಬಿದ್ದರು. ಗುಣಾಢ್ಯನು ವಿಧಿಯವೈಚಿತ್ರ್ಯಕ್ಕೆ ಆಶ್ಚರ್ಯಪಡುತ್ತ, ಅವರನ್ನು ನೋಡುತ್ತ ಬೆರಗಾಗಿ ನಿಂತುಬಿಟ್ಟನು.

ಪರದೇಶದವನಾದ ತಮ್ಮನ್ನು ನೋಡಿ ಅವನು ಅನುಮಾನಿಸುತ್ತಿರುವನೆಂದು ಅವರು ಸಂದೇಹಿಸುತ್ತ—"ಪ್ರಭೊ! ಏನು ಸತ್ಯಬೇಕಾದರೂ ಮಾಡಿ ಹೇಳುತ್ತೇವೆ. ನಾವೇನೂ ಗೂಢಚಾರರಲ್ಲ. ಶುಭ್ರಾವತೀದೇಶದ ಭದ್ರವೀರನೆಂಬ ರೈತನ ಮಕ್ಕಳು, ನಾವು ಹನ್ನೆರಡು ಮಂದಿ ಇದ್ದೆವು. ಒಬ್ಬನು ತೀರಿಹೋದನು.



ಚಿಕ್ಕವನನ್ನು ತಂದೆ ದೂರಕ್ಕೆ ಕಳಿಸಲಾರದೆ ತಮ್ಮ ಬಳಿಯಲ್ಲೇ ಇಟ್ಟುಕೊಂಡಿದ್ದಾರೆ. ಇದು ಸತ್ಯ. ನಂಬಿರಿ ಪ್ರಭೂ!" ಎಂದು ಗೋಳಿಟ್ಟರು.

ಗುಣಾಢ್ಯನು ಕೋಪವನ್ನು ನಟಿಸುತ್ತಾ- "ನಾನು ನಂಬಲಾರೆ. ಆ ಮಂಜುಳಾಂಗ ನೆಂಬವನಾರೋ ಕರಕೊಂಡು ಬಂದು ನನಗೆ ತೋರಿಸಿದರೇನೇ ನಾನು ನಂಬುವೆನು. ಅಷ್ಟರ ವರೆಗೆ ನಿಮ್ಮಲ್ಲೊಬ್ಬನು ನಮ್ಮಲ್ಲಿ ಖೈದಿಯಾಗಿರಬೇಕು. ಉಳಿದ ಒಂಬತ್ತು ಮಂದಿಗೂ ಧಾನ್ಯ ಕೊಡಿಸುತ್ತೇನೆ. ತೆಗೆದುಕೊಂಡು ಹೋಗಿ" ಎಂದನು. ಬೇರೆ ಉಪಾವಿಲ್ಲದೆ ಅವರಲ್ಲೊಬ್ಬನನ್ನು ಅಲ್ಲಿ ಬಿಟ್ಟುಹೋಗಲು ಅವರು ಒಪ್ಪಿಕೊಂಡರು.

ರಾಜಭಟರು ಅವರ ಸಂಚಿಯಲ್ಲಿ ಧಾನ್ಯಗಳನ್ನು ಸುರಿದರು. ಸಂಚಿಗಳನ್ನು ಕಟ್ಟುವ ಮುಂಚೆ, ಗುಣಾಢ್ಯನು ಅವರು ಕೊಟ್ಟ ಹಣವನ್ನು ಅವರಿಗೆ ತಿಳಿಯದಂತೆಯೇ ಆ ಸಂಚಿಯೊಳಗೇ ಹಾಕಿಸಿ ಕಟ್ಟಿದನು.

ಆ ಒಂಭತ್ತುಮಂದಿಯೂ ಸಂಚಿಗಳನ್ನು ಕತ್ತೆಗಳ ಮೇಲೆ ಹೊರಿಸಿಕೊಂಡು ಹೊರಟರು. ದಾರಿಯಲ್ಲಿ ಆಹಾರಕ್ಕಾಗಿ ಆ ಸಂಚಿಯನ್ನು ಬಿಚ್ಚಿನೋಡಿದಾಗ ಅವರು ಕೊಟ್ಟ ಹಣವೂ ಅದರಲ್ಲಿರುವುದು ತೋರಿತು. ಇದನ್ನು ನೋಡಿ ಗಾಬರಿಯಾಯಿತು. ತಾವು ಕೊಟ್ಟ ಹಣ ತಮ್ಮ ಸಂಚಿಯಲ್ಲೆ ಇರುವುದು ತಮ್ಮ ಪೊರಬಾಟೇನೋ ಎಂದು ಹೆದರಿದರು.



ಇನ್ನೊಮ್ಮೆ ಬಂದಾಗ ನೋಡಿಕೊಳ್ಳೋಣವೆಂದು ಧೈರ್ಯಮಾಡಿಕೊಂಡು ಹೊರಟರು.

ಮನೆಗೆ ಮುಟ್ಟಿದಕೂಡಲೇ ನಡೆದ ವಿಷಯಗಳನ್ನೆಲ್ಲಾ ಹೂವುಸುರಿದಹಾಗೆ ತಂದೆಯೊಡನೆ ಹೇಳಿದರು. ಅವರ ಮಾತುಗಳನ್ನು ಕೇಳುತ್ತಲೇ ಭದ್ರವೀರನಿಗೆ ದುಃಖವು ಉಕ್ಕಿಬಂತು. ಕೋಪವೂ ಏರಿತು. "ಅಯ್ಯೋ! ನೀವು ಇಷ್ಟು ಮಂದಿಯಿದ್ದಾಗಿ ಆ ಗುಣಾಢ್ಯ ಕಾಡು ಮೃಗಗಳಪಾಲಾದ. ಈಗ ನನ್ನ ಕಡೇ ಮಗ ಮಂಜುಳಾಂಗನನ್ನು ಕೂಡಾ ಕೊಂಡೊಯ್ಯುವಿರಾ? ಮೊದಲು ನನ್ನನ್ನು ಕೊಂದು, ನಂತರ ಅವನನ್ನು ಕೊಂಡೊಯ್ಯಿರಿ!" ಎಂದನು ಆವೇಶದಿಂದ.

ಅಂದು ತಾವು ಗುಣಾಢ್ಯನಿಗೆ ಮಾಡಿದ ದ್ರೋಹಕ್ಕೆ, ಈಗ ಬಡ್ಡಿಯೊಂದಿಗೆ ಶಾಸ್ತಿ



ಜರುಗುತ್ತಿಯೆಂದು ಅವರಿಗೆಲ್ಲಾ ತೋರಿತು. ಅಸ್ತು. ಆದದ್ದು ಆಗಿಹೋಯಿತು. ಅಲ್ಲಿ ಖೈದಿಯಾಗಿ ಬಿಟ್ಟುಬಂದ ತಮ್ಮನನ್ನು ಬಿಡಿಸಿಕೊಂಡುಬರಬೇಡವೆ? ಮುಂದೆಯೂ ನಮಗೆ ಧಾನ್ಯವು ಬೇಡವೆ? ಇವಕ್ಕಾಗಿಯಾದರೂ ಮಂಜುಳಾಂಗನನ್ನು ಒಮ್ಮೆ ಮೈನಾಕ ದ್ವೀಪಕ್ಕೆ ಕರೆದೊಯ್ಯದೆ ನಿವೃತ್ತಿಯಿಲ್ಲ. ಬೇಗನೇ ವಾಪಸು ಕರೆದುಕೊಂಡು ಬರುತ್ತೇವೆ" ಎಂದು ನಂಬಿಸಿದರು.

ಭದ್ರವೀರನು 'ಸರಿ' ಎಂದು ಒಪ್ಪಲೇಬೇಕಾಯಿತು.

ಮಂಜುಳಾಂಗನನ್ನು ಕರೆದುಕೊಂಡು, ಒಂಭತ್ತು ಮಂದಿ ಅಣ್ಣಂದಿರೂ ಮೈನಾಕ ದ್ವೀಪವನ್ನು ಸೇರಿಕೊಂಡರು. ಅಲ್ಲಿ ಖೈದಿಯಾಗಿರುವನೆಂದು ತಿಳಿದಿದ್ದ ತಮ್ಮನಿಗೆ ರಾಜೋಪಚಾರಗಳು ನಡೆಯುತ್ತಿರುವುದೆಂದು ತಿಳಿದು ಅತ್ಯಾಶ್ಚರ್ಯಪಟ್ಟರು.

ಇವರೆಲ್ಲ ಪುನಃ ಬಂದುದು ತಿಳಿಯುತ್ತಲೇ ಗುಣಾಢ್ಯನು ಅವರೆಲ್ಲರನ್ನೂ ಒಳಕ್ಕೆ ಬರಮಾಡಿಕೊಂಡನು. ಎಲ್ಲರಿಗೂ ಪಂಚಭಕ್ಷ್ಯ ಪರಮಾನ್ನಗಳೊಂದಿಗೆ ದೊಡ್ಡ ಔತಣಕ್ಕೇ ಏರ್ಪಾಡು ಮಾಡಿದನು. ಕ್ರಮವಾಗಿ ಹನ್ನೆರಡು ಮಣೆಗಳನ್ನು ಹಾಕಿಸಿದನು. ಮೊದಲನೆಯ ಮಣೆಯ ಮೇಲೆ ದೊಡ್ಡಣ್ಣನನ್ನೂ, ಅನಂತರ ಎರಡನೆಯವನನ್ನೂ ಹೀಗೆ ಕ್ರಮವಾಗಿ ಅವನು ಕುಳ್ಳಿರಿಸುವುದನ್ನು ನೋಡಿ ಅವರಿಗೆ ಇನ್ನಷ್ಟು ಆಶ್ಚರ್ಯವಾಯಿತು. "ನಮ್ಮಲ್ಲಿ ಯಾರು ದೊಡ್ಡವ ಯಾರು ಚಿಕ್ಕವನೆಂಬ ಕ್ರಮವು ಇವನಿಗೆ ಹೇಗೆ ತಿಳಿಯಿತೋ!" ಎಂದು ಅವರು ಬೆರಗಾಗುತ್ತಿರುವಾಗ, ಗುಣಾಢ್ಯನು ಹನ್ನೊಂದನೇ ಮಣೆಯಲ್ಲಿ ತಾನು ಕುಳಿತು, ತನ್ನ ಪಕ್ಕದಲ್ಲಿ ಮಂಜುಳಾಂಗನನ್ನು ಕೂಡಿಸಿಕೊಂಡನು.

ತನ್ನ ತಮ್ಮ ಮಂಜುಳಾಂಗನಿಗೆ ಅದು ತಿನ್ನು ಇದು ತಿನ್ನು ಎಂದು ಒತ್ತಾಯಿಸುತ್ತಾ, ತನ್ನ ಊಟದ ಲಕ್ಷ್ಯವನ್ನೆ ಮರೆತುಹೋದನು ಗುಣಾಢ್ಯ. ಎಲ್ಲರಿಗೂ ಆನಂದ ಆಶ್ಚರ್ಯ ಬೆರಗು!

"ಮಹಾ ಪ್ರಭು! ಬೆಳಗಾಗುತ್ತಲೇ ನಾವು ಹೊರಟು ಹೋಗಬೇಕು. ನಮ್ಮ ತಂದೆ ಈ ಚಿಕ್ಕವನನ್ನು ಬಿಟ್ಟು ಇರಲಾರನು" ಎಂದರು. ಆ ಅಣ್ಣಂದಿರು. 'ತಂದೆ' ಎಂಬ ಮಾತು ಕಿವಿಗೆ

ಬೀಳುತ್ತಲೇ ಗುಣಾಢ್ಯನಿಗೆ ಕಣ್ಣೀರು ತುಂಬಿ ಬಂತು. "ತಂದೆ ಕೂಡಾ ಇವರೊಂದಿಗೆ ಬಂದಿದ್ದರೆ ಎಷ್ಟು ಚೆನ್ನಾಗಿತ್ತು!" ಎಂದು ತೋರಿತು.

ಬೆಳಗ್ಗೆಯೇ ಹೊರಡುವಂತೆ ಗುಣಾಢ್ಯನ ಅನುಜ್ಞೆ ದೊರೆಯಿತು. ಅವರೆಲ್ಲಾ ಅವನಿಗೆ ತುಂಬಾ ಧನ್ಯವಾದಗಳನ್ನು ಹೇಳಿದರು.

ಗುಣಾಢ್ಯನು ರಾಜಭಟರನ್ನು ಗುಟ್ಟಾಗಿ ಕರೆದು, "ಇವರ ಹನ್ನೊಂದು ಸಂಚಿಗಳಲ್ಲಿಯೂ ಧಾನ್ಯವನ್ನು ತುಂಬಿಸಿರಿ. ಅವರು ಕೊಟ್ಟ ಬೆಲೆಯ ಹಣವನ್ನೂ ಅವರಿಗೆ ತಿಳಿಯದಂತೆಯೇ ಅದರೊಳಗಿಡಬೇಕು. ಹಾಗೆಯೇ ಮಂಜುಳಾಂಗನು ಪಾಯಸ ಕುಡಿದ ಬಂಗಾರದ ಲೋಟೆಯನ್ನು ಕೂಡಾ ಅವನ ಸಂಚಿಯೊಳಗಿಟ್ಟು ಕಟ್ಟಿಬಿಡಿ." ಎಂದು ಆಜ್ಞಾಪಿಸಿದನು. ಸೇವಕರು ಹಾಗೆಯೇ ಮಾಡಿಬಿಟ್ಟರು.

ಆ ಹನ್ನೊಂದು ಅಣ್ಣತಮ್ಮಂದಿರು ನಗರವನ್ನು ದಾಟಿದರೋ ಇಲ್ಲವೋ, ಕೆಲಮಂದಿ ರಾಜ ಭಟರು ಕುದುರೆಯ ಸವಾರರಾಗಿ ಬಂದು, ಅವರನ್ನು ಅಡ್ಡಗಟ್ಟಿದರು. "ಏಕೆ? ನಾವೇನು ಮಾಡಿದೆವು? ನಾವು ರಾಜನ ಗೌರವಕ್ಕೆ ಪಾತ್ರರಾಗಿ ಹೊರಟಿದ್ದೇವಲ್ಲಾ?" ಎಂದು ಅವರೆಲ್ಲಾ ಆಕ್ಷೇಪಣೆ ಎತ್ತಿದರು. ರಾಜಭಟರು ಅದೊಂದನ್ನೂ ಕಿವಿಯ ಮೇಲೆ ಹಾಕಿಕೊಳ್ಳದೆ ಅವರ ಮೂಟೆಗಳನ್ನು ಒಂದೊಂದಾಗಿ ಬಿಚ್ಚಿ ಶೋಧಿಸಲಾರಂಭಿಸಿದರು. ಮಂಜುಳಾಂಗನ ಸಂಚಿಯಿಂದ ಬಂಗಾರದ



ಲೋಟೆಯನ್ನು ಅವರು ತೆಗೆಯುತ್ತಲೇ, ಆ ಅಣ್ಣ ತಮ್ಮಂದಿರೆಲ್ಲಾ ಭಯಭ್ರಾಂತರಾಗಿ ನಿಂತು ಹೋದರು. ರಾಜಭಟರು ಬಿಡುವರೇ? ಮಂಜುಳಾಂಗನ ಕೈಗೆ ಬೇಡಿ ಹಾಕಿ ಎಳೆದುಕೊಂಡು ಹೋಗಿಯೇ ಬಿಟ್ಟರು.

ಹತ್ತು ವರ್ಷಗಳ ಕೆಳಗೆ ಗುಣಾಢ್ಯನನ್ನು ಆ ಗುಲಾಮ ವ್ಯಾಪಾರಿಗಳು ಹೀಗೆಯೇ ಎಳೆದುಕೊಂಡು ಹೋಗಿದ್ದರು. ಅದನ್ನು ನೆನೆಯುತ್ತಾ ಅವರೆಲ್ಲಾ ಗೋಳಿಟ್ಟರು. ಆದರೆ ಅಂದಿನ ಪರಿಸ್ಥಿತಿ ಬೇರೆ, ಇಂದಿನ ಪರಿಸ್ಥಿತಿ ಬೇರೆ. ಇಂದು ಮಂಜುಳಾಂಗನನ್ನು ಬಿಟ್ಟು ಹೋಗಲು ಸಾಧ್ಯವೇ ಇಲ್ಲ. ಹೋದರೆ ತಂದೆಯ ಗತಿ ಏನು? ಆದ್ದರಿಂದ ಅವರೆಲ್ಲಾ ಆ ರಾಜಭಟರ ಹಿಂದೆಯೆ ಹೋಗಿ—"ಪ್ರಭು! ಬಂಗಾರದ ಲೋಟೆ ನಮ್ಮವನ ಸಂಚಿಯಲ್ಲಿ

ಹೇಗೆ ಬಂತೋ ನಮಗೆ ಯಾರಿಗೂ ಗೊತ್ತಿಲ್ಲ. ಇವನು ಕಳ್ಳತನ ಮಾಡುವವನಲ್ಲ. ದಯ ಮಾಡಬೇಕು" ಎಂದು ಗುಣಾಢ್ಯನ ಮುಂದೆ ಪ್ರಾರ್ಥಿಸಿಕೊಂಡರು.

ಅದಕ್ಕೆ ಗುಣಾಢ್ಯನು :—" ನೀವೆಲ್ಲಾ ನಿಶ್ಚಿಂತೆಯಾಗಿ ಹೊರಟುಹೋಗಿರಿ. ಕಳ್ಳನು ಕಳವಿನ ಮಾಲುಸಮೇತ ಸಿಕ್ಕಿದ್ದಾನಾದ್ದರಿಂದ ಅವನೊಬ್ಬನನ್ನೆ ಶಿಕ್ಷಿಸಲಾಗುವುದು. ನೀವೆಲ್ಲಾ ಹೋಗಿ" ಎಂದನು.

"ಪ್ರಭೂ! ನಾವು ಹತ್ತುಮಂದಿ ಬೇಕಾದರೆ ನಿಮ್ಮ ಪಾದ ಸೇವಕರಾಗಿ ಇಲ್ಲಿಯೇ ಉಳಿದುಕೊಳ್ಳುತ್ತೇವೆ. ಮಂಜುಳಾಂಗನನ್ನು ಕಾಣದೆ ನಮ್ಮ ತಂದೆ ಬದುಕಲಾರರು. ಅವನಿಲ್ಲದೆ ನಾವು ತಂದೆಯ ಮುಖನೋಡುವಂತಿಲ್ಲ. ಮೊದಲೇ ನಾವು ತಂದೆಗೆ ದ್ರೋಹ ಮಾಡಿದ್ದೇವೆ. ಅವರು ತಮ್ಮ ಪಂಚಪ್ರಾಣಗಳನ್ನೂ ಮಂಜುಳಾಂಗನಮೇಲೆಯೇ ಇಟ್ಟಿದ್ದಾರೆ. ಅವನು ನಮ್ಮೊಂದಿಗಿಲ್ಲದಿದ್ದರೆ ಅವರು ಎದೆಯೊಡೆದು ಸಾಯುತ್ತಾರೆ. ನಾವು ದ್ರೋಹಿಗಳು! ಪಾಪಿಗಳು! ನಿಮ್ಮಿಷ್ಟಬಂದಂತೆ ನಮ್ಮನ್ನು ಶಿಕ್ಷಿಸಿರಿ! ಮಂಜುಳಾಂಗನು ನಿರಪರಾಧಿ. ಅವನನ್ನುಮಾತ್ರ ಬಿಟ್ಟುಬಿಡಿ!" ಎಂದು ಅಂಗಲಾಚುತ್ತಾ ತಾವು ಮಾಡಿದ ಪಾಪ ಕೃತ್ಯಗಳನ್ನೆಲ್ಲಾ ಹೇಳಿಕೊಂಡರು.

ಗುಣಾಢ್ಯನ ಹೃದಯ ಕರಗಿತು. ಕಣ್ಣೀರು ಸುರಿಯಿತು. 'ಹೋಗಿರಿ' ಎಂದು ಸನ್ನೆಮಾಡಿದನು. ಅವರಿಗೆ ಒಂದೂ ತಿಳಿಯದಾಯಿತು.

ಇಷ್ಟರಲ್ಲಿ ಗುಣಾಢ್ಯನು ಇನ್ನು ತಾಳಲಾರದೆ "ತಮ್ಮಾ ಮಂಜುಳಾ!" ಎನುತ್ತಾ ಮಂಜುಳಾಂಗನನ್ನು ಆಲಿಂಗಿಸಿಕೊಂಡನು. ಈಗ ಮಂಜುಳಾಂಗನಿಗೂ ಅಣ್ಣನ ಗುರುತು ಹತ್ತಿತು. ಉಳಿದವರೂ ಗುರುತುಹಿಡಿದು ಆಶ್ಚರ್ಯಹೋದರು.

ಗುಣಾಢ್ಯನು ಅಣ್ಣಂದಿರನ್ನೆಲ್ಲಾ ಆದರಿಸಿ, ತಂದೆಯನ್ನುಕೂಡಾ ಅಲ್ಲಿಗೇ ಬರಮಾಡಿಸಿಕೊಂಡನು. ಗುಣಾಢ್ಯನಿಂದ ಎಲ್ಲರೂ ಸುಖಪಡುವಂತಾಯಿತು. ಮೊತ್ತಮೊದಲು ಗುಣಾಢ್ಯನಿಗೆ ಬಂದ ಸ್ವಪ್ನವು, ಹೀಗೆ ಎಲ್ಲರೂ ವಿಸ್ಮಯಹೊಂದುವ ರೀತಿಯಲ್ಲಿ ನಿಜವಾಯಿತು.






ಕೊಳೂರಿನಲ್ಲಿ ರಾಮಭಂಡಾರಿ ಎಂಬ ಸಾವುಕಾರನೂ ಭೂಪತಿ ಎಂಬ ಒಕ್ಕಲಿಗನೂ ತುಂಬಾ ಪರಿಚಯದವರಾಗಿದ್ದರು. ಒಂದಾನೊಂದು ದಿವಸ ಭೂಪತಿ ಸಾವುಕಾರನನ್ನು ಕುರಿತು "ಅತೀ ಅಗತ್ಯವಿದೆ. ಇಪ್ಪತ್ತೈದು ರೂಪಾಯಿ ಕೈಗಡವಾಗಿ ಕೊಡಿ. ನಾಲ್ಕು ದಿನದೊಳಗೆ ಕೊಟ್ಟು ತೀರಿಸುವೆನು" ಎಂದು ಕೇಳಿದನು. "ಸರಿ" ಎಂದು ಸಾವುಕಾರನು ಕೊಟ್ಟನು. ಭೂಪತಿ ಹೇಳಿದ ಗಡುವು ಹೋಗಿ ನಾಲ್ಕು ದಿನವಲ್ಲ, ನಾಲ್ಕು ವರ್ಷಗಳೇ ಸಂದುಹೋದುವು. ಆ ಸಾಲ ತೀರಿಸಲೇ ಇಲ್ಲ. ಭೂಪತಿ ಸಾವುಕಾರನನ್ನು ಕಂಡಾಗಲೆಲ್ಲಾ "ಇಗೋ ಕೊಡುವೆ, ಅಗೋ, ಕೊಡುವೆ" ಎಂದು ಕಾಲ ತಳ್ಳುತ್ತಾ ಬಂದಿದ್ದ.

ಒಂದು ದಿನ ಸಾವುಕಾರನು ಎಲ್ಲಿಗೋ ಹೊರಟಿದ್ದ. ಆಗ ದಾರಿಯಲ್ಲಿ ಅವನಿಗೆ ತಂತೀ ಜವಾನನು ಇದಿರಾಗಿ ಒಂದು ತಂತಿಯನ್ನು ಕೊಟ್ಟ. "ತಂತಿ ಕಂಡ ಕೂಡಲೇ ಹೊರಟು ಬರಬೇಕು" ಎಂದು ಕುಂದಾಪುರದಿಂದ ಅವನ ಬಾವನಿಂದಲೇ ತಂತಿ ಬಂದಿತ್ತು. ಅದೇ ಸಮಯಕ್ಕೆ ಸರಿಯಾಗಿ ಕುಂದಾ ಪುರಕ್ಕೆ ಹೋಗುವ ಬಸ್ಸೂ ಬಂದುಬಿಟ್ಟಿತು. ಅದು ತಪ್ಪಿದರೆ ಮತ್ತೆ ಅಂದು ಬಸ್ಸಿಲ್ಲ. ಜೇಬಿನಲ್ಲಿದ್ದ ದುಡ್ಡು ಬರೀ ಬಸ್ಸಿನ ಚಾರ್ಜಿಗೆ ಮಾತ್ರವೇ ಸಾಕಾಗಿತ್ತು. "ಸರಿ ಹೊರಟೇಬಿಡೋಣ. ಹೋಗುವುದು ಅತ್ತೆಯ ಮನೆಗೇ ಆದುದರಿಂದ, ಏನೂ ತೊಂದರೆಯಾಗಲಿಕ್ಕಿಲ್ಲ" ಎಂದು ಕೊಂಡು ರಾಮಭಂಡಾರಿ ಬಸ್ಸು ಹತ್ತಿಯೇ ಬಿಟ್ಟನು.

ಆಶ್ಚರ್ಯ! ಆ ಬಸ್ಸಿನಲ್ಲಿಯೇ ಭೂಪತಿ ಕೂಡಾ ಇದ್ದಾನೆ! "ಎತ್ತ ಕಡೆಗೆತ್ತ ಕಡೆಗೆಂದು" ಇಬ್ಬರೂ ಕೇಳಿಕೊಂಡರು. ಬಳಿಕ ಭೂಪತಿ ಯಥಾ ಪ್ರಕಾರವಾಗಿ "ನಿಮ್ಮ ಸಾಲದ ವಿಷಯ ಏನೂ ಭಯಪಡಬೇಡಿ ಸ್ವಾಮಿ, ಬೇಗದಲ್ಲಿ ಕೊಡುತ್ತೇನೆ" ಎಂದನು. "ಇದ್ದರೆ ಈಗಲೆ ಕೊಡು ನಾನು ಆಕಸ್ಮಿಕವಾಗಿ ಬಸ್ಸು ಹತ್ತಿದ್ದೇನೆ. ದುಡ್ಡೂ ತುಂಬಾ ಕಡಮೆಯಾಗಿದೆ." ಎಂದು ರಾಮಭಂಡಾರಿಯೆಂದ. "ಅಯ್ಯೋ! ಏನು ಮಾಡಲಿ? ಒಂದು ಕಾಲಾಣೆ ಕೂಡಾ ನನ್ನ ಬಳಿಯಲ್ಲಿಲ್ಲವಲ್ಲ ಸ್ವಾಮಿ!" ಎಂದು ಭೂಪತಿ ಆಣೆ ಮಾಡಿ ಹೇಳಿದ.

"ಕಮಲಪ್ರಿಯ" ಮದರಾಸು

ಬಸ್ಸು ಒಳ್ಳೇ ಜೋರಾಗಿ ಹೋಗುತ್ತಿತ್ತು. ಏಕೋ, ಡ್ರೈವರನು ಚಟಕ್ಕನೆ ಬಸ್ಸನ್ನು ನಿಲ್ಲಿಸಿಬಿಟ್ಟನು! ದಾರಿಯಲ್ಲಿ ಅಡ್ಡವಾಗಿ ಮರದ ತುಂಡೊಂದು ಬಿದ್ದಿತ್ತು.

ಬಸ್ಸು ನಿಲ್ಲುತ್ತಲೇ ಪಕ್ಕದ ಮರಗಳಸಂದಿನಿಂದ ಐದುಮಂದಿ ಆಯುಧಪಾಣಿಗಳು ಓಡಿಬಂದು, ಬಸ್ಸನ್ನು ಮುತ್ತಿನಿಂತು—"ಎಲ್ಲಿದ್ದವರಲ್ಲೇ ಇರ್ರಿ! ಕದಲಿದರೆ ಕೂಗಿದರೆ ಪಿಸ್ತೋಲ್ ಹಾರಿಸಿ ಬಿಟ್ಟೇನು! ನಿಮ್ಮ ನಿಮ್ಮ ಕೈಯುಲ್ಲಿ ಕಿಸೆಯಲ್ಲಿ ಇರುವ ಹಣವನ್ನೂ ಬಂಗಾರಗಳನ್ನೂ ದೆಗೆದಿತ್ತ ಕೊಡಿ!" ಎಂದು ಜೋರು ಮಾಡಿದರು.

ಎಲ್ಲರೂ ಹೆದರಿ ತಂತಮ್ಮ ಪರ್ಸುಗಳನ್ನು ಹೊರಕ್ಕೆ ತೆಗೆದರು. ಅವರೊಳಗೆ ತೀರಾ ನಿರ್ವಿಚಾರವಾಗಿದ್ದವನು ರಾಮುಭಂಡಾರಿಯೊಬ್ಬನೇ. ಬಸ್ಸುಚಾರ್ಜಿ ಕೊಟ್ಟಾಗಿತ್ತು. ಇನ್ನು ಮಿಕ್ಕ ಚಿಲ್ಲರೆ ಜೇಬಿನಲ್ಲಿರುವುದು ಕೇವಲ ಏಳಾಣೆ! ಅವನು ಆ ಚಿಲ್ಲರೆಯನ್ನು ಎತ್ತಿಕೊಂಡು, ಸಿದ್ಧವಾಗಿ ನಿಂತು ಪಕ್ಕದಲ್ಲಿರುವ ಭೂಪತಿಯನ್ನು ನೋಡಿ—"ನೀನು ನನಗಿಂತಲೂ, ಈ ಬಸ್ಸಿನ ಎಲ್ಲಾ ಜನರಿಗಿಂತಲೂ ಅದೃಷ್ಟವಂತ! ಬಹಳ ಪುಣ್ಯವಂತ. ಕಾಲಾಣೆ ಕೂಡಾ ನಿನ್ನ ಜೋಬಿನಲಿಲ್ಲ!" ಎಂದ.

ಭೂಪತಿ ಮಾತಾಡಲಿಲ್ಲ. ಅವನ ಜೇಬಿನಲ್ಲಿ ೨೫ ರೂಪಾಯಿಗಳಿದ್ದುವು! ಅವನಿಗೇನು ತೋರಿತೋ, ಚಟಕ್ಕನೇ ತನ್ನ ಟೊಂಕದ ಗಂಟಿನೊಳಗಿನಿಂದ ೫ ರೂಪಾಯಿಯ ೫ ನೋಟನ್ನು ತೆಗೆದು ಸಾವುಕಾರನ ಕೈಯಲ್ಲಿ ಕೊಟ್ಟು—"ಲೆಕ್ಕ ನೋಡಿಕೊಳ್ಳಿ, ನಿಮಗೆ ಕೊಡಬೇಕಾಗಿದ್ದ ಸಾಲ ಇಪ್ಪತ್ತೈದು ರೂಪಾಯಿ ಕೊಟ್ಟು ಬಿಟ್ಟೆ. ಸಾಲ ತೀರಿಹೋಯಿತು"! ಎಂದನು. ರಾಮುಭಂಡಾರಿ ತನ್ನ ಜೇಬಿನಲ್ಲಿರುವ ಏಳಾಣೆಯೊಂದಿಗೆ ಆ ಇಪ್ಪತ್ತೈದು ರೂಪಾಯಿಗಳನ್ನೂ ಸೇರಿಸಿ, ಕಳ್ಳರು ಬರುತ್ತಲೇ ಅವರ ಕೈಗಿತ್ತುಬಿಟ್ಟನು.

ಕಳ್ಳರು ಎಲ್ಲರನ್ನೂ ಸುಲಿದಾಯಿತು. ಭೂಪತಿ "ನನ್ನ ಹತ್ತಿರ ದಮ್ಮಡಿಯಿಲ್ಲ!" ಎಂದನು. ಅನನಿಗೆರಡು ಹೊಡೆದು, ಜೇಬುಗಳನ್ನು ಪರಿಶೋಧಿಸಿದರು. ರಾಮುಭಂಡಾರಿ—"ಆಹ! ಸರಿಯಾದ ಸಂಧಿಯಲ್ಲಿ ಸಾಲ ತೀರಿಸಿದ ಸೂಕ್ಷ್ಮಜ್ಞ!" ಎಂದು ಮುಗುಳ್ನಗುತ್ತಾ ಮೆಚ್ಚಿಕೊಂಡನು.



1

2





# ಇಂದಿನ ಮಕ್ಕಳು  ಮುಂದಿನ ಜನಾಂಗ





3

4

1. ಚಿ. ಪಾಪಾ - ನಂಪತಿ
2. ಚಿ. ಹೇಮ, ಸ್ವರ್ಣ - ನಗರಿ
3. ಚಿ. ವಿ. ಡಿ. ಗೋವಿಂದರಾಜ - ಮದ್ರಾಸು
4. ಚಿ. ಶರಚ್ಚಂದ್ರ - ವಿಜಯನಗರ

## ಬಣ್ಣಬಣ್ಣದ ಚಿತ್ರ

ಕೃಷ್ಣ ಸರ್ಪಗಳ ಕಡಿತದಿಂದ ಭೀಮನಿಗೆ ಏನೂ ಆಗದೆ, ಅವನು ಸುಖವಾಗಿ ಓಡಾಡುತ್ತಿರುವುದನ್ನು ನೋಡಿ, ದುರ್ಯೋಧನಾದಿಗಳಿಗೆ ಬಹಳ ಸಂಕಟವಾಯಿತು. ಅಸೂಯೆ ಮೊದಲಿಗಿಂತಲೂ ಹೆಚ್ಚಿತು. ದುರ್ಯೋಧನ, ಶಕುನಿ, ಕರ್ಣ ಈ ಮೂವರೂ ಸೇರಿಕೊಂಡು ಭೀಮನನ್ನು ಹೇಗೆ ನಾಶ ಮಾಡುವುದೆಂದು ಗುಟ್ಟಾಗಿ ಮಂತ್ರಾಲೋಚನೆ ಮಾಡಿದರು.

ಲಡ್ಡುಗಳೇದರೆ ಭೀಮನಿಗೆ ತುಂಬ ಇಷ್ಟವೆಂದು ಅವರಿಗೆ ಗೊತ್ತಿತ್ತು. ಶಕುನಿಯ ಯೋಚನೆಯಂತೆ ದುರ್ಯೋಧನನು ವಿಷ ಬೆರಸಿ ಲಡ್ಡು ಮೊದಲಾದ ಭಕ್ಷ್ಯಗಳನ್ನು ತಯಾರಿಸಿದನು. ಬಳಿಕ ಪಾಂಡವರನ್ನು ಕರೆದುಕೊಂಡು ಗಂಗಾ ತೀರದ ಪ್ರಮಾಣಕೋಟಿಗೆ ಹೋಗಿ, ಆಟದ ಏರ್ಪಾಡು ಮಾಡಿದನು. ಆಡಿ ದಣಿದಾಗ ಭಕ್ಷ್ಯಗಳನ್ನು ತಿಂದರು. ಭೀಮನು ವಿಷ ಬೆರೆತ ಭಕ್ಷ್ಯಗಳನ್ನೆ ತಿಂದನು. ಏನೂ ಆಗಿಲ್ಲ. ಅವನ ಹೊಟ್ಟೆಯೊಳಗೆ ಎಲ್ಲವೂ ಜೀರ್ಣವಾಗಿ ಹೋಯಿತು. ಭೀಮನು ಸುಖವಾಗಿ ನಿದ್ರಿಸಿದನು.

ವಿಷವನ್ನು ಅರಗಿಸಿಕೊಂಡು ಅವನು ಸುಖವಾಗಿರುವುದನ್ನು ನೋಡಿ, ದುರ್ಯೋಧನಾದಿಗಳು ಮತ್ತೊಂದು ಉಪಾಯ ಮಾಡಿದರು:

ಗಂಗಾನದಿಯೊಳಗೆ ಅನೇಕ ಶೂಲಗಳನ್ನು ನೆಟ್ಟು, ನಿದ್ರೆಯಲ್ಲಿರುವ ಭೀಮನನ್ನು ಕಟ್ಟಿ, ಎತ್ತಿ, ಆ ಶೂಲಗಳ ಮೇಲೆ ಬೀಳುವಂತೆ ನದಿಯೊಳಗೆ ಹಾಕಿದರು. ಆದರೆ ಪ್ರವಾಹವೇಗವು ಅವನನ್ನು ಶೂಲಕ್ಕೆ ಬೀಳಿಸದೆ ಆಚೆಗೆ ಜಾರಿಸಿತು. ಮುಳುಗುತ್ತಾ ಭೀಮನು ಪಾತಾಳವನ್ನು ಸೇರಿದನು. ಮೈ ತಣ್ಣಗಾದುದರಿಂದ ಎಚ್ಚರಾಯಿತು.

ನಾಗಲೋಕದ ಅಧಿಪತಿಗಳಾದ ಆರ್ಯಕ,ವಾಸುಕಿ ಎಂಬುವರು ಭೀಮನನ್ನು ಆದರಿಸಿದರು. ಆರ್ಯಕನಿಗೆ ಭೀಮನು ದೂರದ ಸಂಬಂಧಿಕನೆಂದು ತಿಳಿಯಿತು. ಬಹಳ ಸಂತೋಷದಿಂದ ಅವನಿಗೆ ಸಿದ್ಧರಸವನ್ನು ಕುಡಿಯಲಿತ್ತರು. ಅದರಿಂದ ಭೀಮನು ಸಾವಿರ ಆನೆಯ ಬಲವನ್ನು ಪಡೆದು, ಅವರಿಂದ ಬೀಳ್ಕೊಂಡು ಹೊರಟನು.

ಇತ್ತ ಭೀಮನನ್ನು ಕಾಣದೆ, ಕುಂತಿ, ವಿದುರ, ಯುಧಿಷ್ಠಿರ ಮೊದಲಾದವರು ಚಿಂತಿಸುತ್ತಿರುವಾಗ, ಭೀಮನು ಅಪೂರ್ವ ತೇಜಸ್ಸಿನಿಂದ ಬಂದು, ಅವರಿಗೆ ಮಣಿದನು. ಅವನ ಕತೆಯನ್ನು ಕೇಳಿ ವಿದುರನು- "ಒಳ್ಳೆಯದು. ಅವರು ಮಾಡಿದ ಕೇಡುಕು ನಮಗೆ ಒಳ್ಳೆಯದಾಗಿಯೇ ಪರಿಣಮಿಸಿತು. ಈ ಸಮಾಚಾರವು ನಮ್ಮೊಳಗೇ ಗುಟ್ಟಾಗಿರಲಿ." ಎಂದು ಹೇಳಿದನು.

ಚಿಂತೆಯಿಂದ ಬಿದ್ದಿದ್ದ ಹಳೆಯ ಬಾದಷಹನಿಗೆ, ಆಕಸ್ಮಿಕವಾಗಿ ಬುಲ್‌ಬುಲ್ ಗಾನವು ಕೇಳಲಾರಂಭಿಸಿತು! ಕೂಡಲೇ ಮಲಗಿದ್ದ ಬಾದಷಹನು ಎದ್ದು ಕಿಟಕಿಯ ಬಳಿಗೆ ಹೋಗಿ ನಿಂತು ಆದನ್ನು ಆಲಿಸ ತೊಡಗಿದನು. ಅದು ಸಹಜವಾದ ಬುಲ್‌ಬುಲ್ಲಿನ ಹಾಡು. ಯಾಂತ್ರಿಕ ಪಕ್ಷಿಯ ಕೃತ್ರಿಮ ಗಾನವಲ್ಲ.

ಹಾಡುತ್ತಾ ನಿಜ ಬುಲ್‌ಬುಲ್ ಕಿಟಕಿಯಿಂದ ಒಳಗೆ ಬಂದು ಯಾಂತ್ರಿಕ ಪಕ್ಷಿಯ ಬಳಿಯಲ್ಲಿಯೇ ಕುಳಿತಿತು. "ದೇವ ಲೋಕದಿಂದ ಇಳಿದು ಬಂದಿಯಾ ಬುಲ್‌ಬುಲ್! ನಿನಗೆ ನನ್ನ ಸುಸ್ವಾಗತ! ನಿನ್ನನ್ನು ತಾತ್ಸಾರ ಮಾಡಿ ನಾನು ಪಾಪ ಕಟ್ಟಿಕೊಂಡೆ. ಈಗ ನನ್ನ ಮೇಲೆ ದಯೆ ಬಂದಿತೆ? ಸಾಯಲಿಕ್ಕಿದ್ದ ನನ್ನನ್ನು ಅಮರ ಗಾನದಿಂದ ಬದುಕಿಸಿದ ಬುಲ್ ಬುಲ್! ಇನ್ನು ನನ್ನನ್ನು ಬಿಟ್ಟು ಹೋಗಲಾರಿಯಷ್ಟೆ?" ಎಂದನು ಬಾದಷಹ. ಹೇಳುತ್ತಾ ಅವನ ಕಣ್ಣಿನಿಂದ ದಳದಳನೆ ನೀರಿಳಿಯಿತು.

ಆಗ ಬುಲ್‌ಬುಲ್—"ಪ್ರಭು. ಮೊತ್ತ ಮೊದಲು ನಾನು ಹಾಡಿದಾಗ ಹೀಗೇ ನಿನ್ನ ಕಣ್ಣಿನಲ್ಲಿ ನೀರಿಳಿಯಿತು. ಈಗಲೂ ಹಾಗೇ ಇಳಿಯುತ್ತಿದೆ." ಎನ್ನುತ್ತಾ ಪುನಃ ಹಾಡಿತು. ಬಾದಷಹನು ಪ್ರೈಮರೆತನು. ನಿದ್ರೆಬಂತು ಬೆಳಗಾಗುವಾಗ ಬಾದಷಹನು ತೀರಾ ಆರೋಗ್ಯವಂತನಾಗಿ ಎದ್ದನು. ದೇಹದಲ್ಲಿ ಹೊಸ ಉತ್ಸಾಹವು ಉಂಟಾಗಿತ್ತು.

## ಹಿಂಬದಿಯ ಚಿತ್ರ

ನೋಡಿದರೆ ಪರಿಚಾರಕರೂ ಬಳಿಯಲ್ಲಿಲ್ಲ. ಎಲ್ಲರೂ ಹೊಸ ಬಾದಷಹನ ಸೇವೆಯಲ್ಲಿ ಮಗ್ನರಾಗಿದ್ದರು. ನಿಜವಾದ ಬುಲ್‌ಬುಲ್ ಮಾತ್ರವೇ ಅಲ್ಲಿತ್ತು. "ಬುಲ್‌ಬುಲ್! ನೀನು ಇಲ್ಲಿಯೇ ಇರು. ನಾನು ಈ ಯಾಂತ್ರಿಕ ಪಕ್ಷಿಯನ್ನು ಚೂರು ಚೂರು ಮಾಡಿ ಬಿಡುತ್ತೇನೆ," ಎಂದು ಕತ್ತಿಯನ್ನೆತ್ತಿದನು. "ಬೇಡ ಪ್ರಭು, ಹಾಗೆ ಮಾಡಿದರೆ ನಾನು ಹಾರಿ ಹೋಗುತ್ತೇನೆ" ಎಂದಿತು ಬುಲ್‌ಬುಲ್. ಬಾದಷಹನು ಶಾಂತನಾದನು. "ನಾನು ಬಂದು ನಿನ್ನನ್ನು ಬದುಕಿಸಿದೆನೆಂದು ಯಾರಿಗೂ ಹೇಳಬೇಡ" ಎನ್ನುತ್ತಾ ಬುಲ್‌ಬುಲ್ ಪಕ್ಷಿ ತೋಟದ ಮರಕ್ಕೆ ಹಾರಿ ಹೋಯಿತು.

ಬಾದಷಹನು ರಾಜ ವೇಷವನ್ನು ಧರಿಸಿಕೊಂಡು ಸಭೆಗೆ ಹೋದನು. ಸಾಯಲಿಕ್ಕಿದ್ದ ಬಾದಷಹನು ಆರೋಗ್ಯವಂತನಾಗಿ ಎದ್ದು ಬಂದದ್ದು ನೋಡಿ ಎಲ್ಲರಿಗೂ ಆಶ್ಚರ್ಯ. ಬಾದಷಹನು ಏನೂ ಕೋಪಿಸದೆ, ಹೊಸ ಬಾದಷಹನನ್ನು ಕೂಡಾ ಕ್ಷಮಿಸಿ, ಎಷ್ಟೋ ವರ್ಷಗಳ ವರೆಗೆ ಸುಖವಾಗಿ ರಾಜ್ಯಭಾರ ಮಾಡಿಕೊಂಡಿದ್ದನು. ಬುಲ್‌ಬುಲ್ ಪಕ್ಷಿಯು ಅಮರ ಗಾನದಿಂದ ಆಗಾಗ ಅವನನ್ನು ಉತ್ಸಾಹ ಪಡಿಸುತ್ತಿತ್ತು. (ಮುಗಿಯಿತು)

# ಇಂದ್ರ

## ಕೋಲಿನ ಮ್ಯಾಜಿಕ್ಕು

ಹನ್ನೊಂದು ಅಂಗುಲ ಉದ್ದ ಅರ್ಧಅಂಗುಲ ದಪ್ಪ ಇರುವ ಒಂದು ಕೋಲನ್ನು ತೆಗೆದುಕೊಂಡು, ಐಂದ್ರಜಾಲಿಕನು ಅದನ್ನು ಪ್ರೇಕ್ಷಕರಿಗೆ ತೋರಿಸಬೇಕು. ಅದಕ್ಕೆಂದು ಪ್ರತ್ಯೇಕವಾದ ಕೋಲೇ ಆಗಬೇಕೆಂದೇನೂ ಇಲ್ಲ. ಪೆನ್ಸಿಲೋ ಲೇಖನಿಯೋ, ಅಡಿಕೋಲಿನ ತುಂಡೋ ಏನೂ ಆಗಬಹುದು.

ಆದರೂ ಐಂದ್ರಜಾಲಿಕನ ಆಧಿಕ್ಯತೆಯನ್ನು ತೋರಿಸಲಿಕ್ಕಾಗಿ, ಅದಕ್ಕೆಂದು ಪ್ರತ್ಯೇಕ ಮ್ಯಾಜಿಕ್ಕು ಕೋಲನ್ನು ತಯಾರಿಸಿ ಇಟ್ಟುಕೊಳ್ಳುವುದು ಒಳ್ಳೆಯದು. ಬಳಿಕ ಐಂದ್ರಜಾಲಿಕನು ಮೊದಲನೆಯ ಚಿತ್ರದಂತೆ ಎರಡು ಕೈಯು ಬೆರಳುಗಳೂ ಪ್ರೇಕ್ಷಕರಿಗೆ ಕಾಣಿಸುವಂತೆ ಪ್ರದರ್ಶಿಸಬೇಕು.



ಐಂದ್ರಜಾಲಿಕನ ಎಲ್ಲಾ ಬೆರಳುಗಳೂ ಪ್ರೇಕ್ಷಕರಿಗೆ ಕಾಣುತ್ತಿವೆ. ಆದರೆ ಒಳಬದಿಯಲ್ಲಿ ಆ ಮ್ಯಾಜಿಕ್ ಕೋಲು ನಿರಾಧಾರವಾಗಿ ಹೇಗೆ ನಿಲ್ಲುತ್ತದೆ? ಅದೇ ತಮಾಷೆ. ಇದರ ಗುಟ್ಟು ಕೇಳಿದರೆ ನಗುಬಂದೀತು. ಅಂದರೆ ದೊಡ್ಡಗುಟ್ಟೇ ಇಲ್ಲ. ಬಲುಸುಲಭ.

ಇದುಮಾಡುವುದು ಎಷ್ಟು ಸುಲಭವಾದರೂ, ಪ್ರೇಕ್ಷಕರು ಮಾತ್ರ ಅಷ್ಟುಸುಲಭವಾಗಿ ಇದರ ಗುಟ್ಟನ್ನು ಹಿಡಿಯಲಾರರು. ನನ್ನ ಅನುಭವದಿಂದ ಹೇಳುವುದಾದರೆ, ದೊಡ್ಡ ದೊಡ್ಡ ಇಂದ್ರಜಾಲಗಳಿಗೆಕೂಡಾ ಕೆಲವು ಸುಲಭವಾದ ಪದ್ಧತಿಗಳಿವೆ. ಈ

# ಜಾಲ

ಗಾರುಡಿಅಂತಹ ಸೌಲಭ್ಯದ ಆಧಾರದಲ್ಲಿಯೇ ನಿಂತಿದೆ. ಇಂದ್ರ ಜಾಲವು ಮೇಲೆ ನೋಡಲಿಕ್ಕೆ ಎಷ್ಟು ಆಶ್ಚರ್ಯಕರ ವೆನಿಸು ವುದೋ ಅವರ ಗುಟ್ಟು ಬಹಳ ಸುಲಭವಾಗಿಯೇ ಇರುತ್ತದೆ.

ಮೊದಲನೇ ಚಿತ್ರವನ್ನು ನೋಡಿದರೆ, ಐಂದ್ರಜಾಲಿಕನ ಕೈಯ ಆಚೇಬದಿಯಲ್ಲಿ ಆ ಕೋಲು ಆಶ್ಚರ್ಯಕರವಾಗಿ ನಿಂತಿದೆಯಲ್ಲಾ? ಇದು ನಿಜವೋ ಅಲ್ಲ ಕಣ್ಣುಕಟ್ಟೋ ಆನಿಸುತ್ತದೆ.



ಅಸಂಭವ ವೆನಿಸುವುದನ್ನು ಸಹಜವಾಗಿ ಕಾಣಿಸುವಂತೆ ಮಾಡುವುದೇ ಇಂದ್ರಜಾಲದಲ್ಲಿರುವ ರಹಸ್ಯವಲ್ಲವೆ? ಎರಡನೆ ಚಿತ್ರ ನೋಡಿದರೆ ಖಂಡಿತವಾಗಿಯೂ ನಗುಬರುತ್ತದೆ. ಏಕೆಂದರೆ, ಐಂದ್ರಜಾಲಿಕನು ಒಂದು ಬೆರಳಿನಿಂದ, ಆ ಮ್ಯಾಜಿಕ್‌ಕೋಲನ್ನು ಅದುಮಿ ಹಿಡಿದಿರುತ್ತಾನೆ. ಈಗ ನೋಡಿ. ಇದೆಷ್ಟು ಸುಲಭವೋ ಗೊತ್ತಾಯಿತಷ್ಟೆ? ಮಾಡಿ ನೋಡೋಣ!

---

ಈ ಗಾರುಡಿಯ ವಿಷಯ ಇನ್ನೂ ವಿವರವಾಗಿ ತಿಳಿಯಬೇಕಾದರೆ ಓದುಗರು 'ಚಂದಮಾಮ'ನ ಹೆಸರನ್ನು ಉದಾಹರಿಸಿ ನೇರಾಗಿ ಪ್ರೊಫೆಸರರಿಗೇ ಬರೆಯಬೇಕು. ಕಾಗದಗಳನ್ನು ಇಂಗ್ಲಿಷಿನಲ್ಲಿಯೇ ಬರೆಯಬೇಕೆಂಬುದು ಮುಖ್ಯ.

ವಿಳಾಸ: ಪ್ರೊಫೆಸರ್ ಪಿ. ಸಿ. ಸರ್ಕಾರ್, ಮೆಜಿಷಿಯನ್
12/3/A, ಜಮಿರ್‌ಲೇನ್, ಬಾಲಿಗಂಜ್, ಕಲಕತ್ತಾ - 19

CHITRA

# ನ ಗೆ ಹ ನಿ

ಟೀಚರ್:—ಆನೆಗಳು ಎಲ್ಲಿ ಕಾಣಿಸುತ್ತವೆ?

ಹುಡುಗ:—ಆನೆಗಳು ದೊಡ್ಡ ಪ್ರಾಣಿಗಳಾದ್ದರಿಂದ ಎದುರು ಬಂದರೆ ಚನ್ನಾಗಿ ಕಾಣುತ್ತವೆ.

* * *

ಡಾಕ್ಟರು:—ರೋಗಿ, ನಿನಗೆ ಯಾರನ್ನಾದರೂ ನೋಡಬೇಕೆಂದಿದೆಯೆ?

ರೋಗಿ:—ಇನ್ನೊಬ್ಬ ಡಾಕ್ಟರನ್ನು ನೋಡಬೇಕೆಂದಿದೆ.

ಬಿ. ಯೋಗೀಶರಾವ್, ಕುಂದಾಪುರ

* * *

ಹರಿಕಥೆ ದಾಸರು:—ಸುರರಾಯ ಸೊಬಗಿಂದ ಬಂದಾ........

ಶ್ರೋತೃಗಳಲ್ಲೊಬ್ಬ:—ಓಹೋ; ಸುರಯ್ಯಾಳ ಚರಿತೆಯಾ!........

ಎಚ್. ನರಸಿಂಹಪ್ಪ, ಸೊರಬ

---

### ಕಳೆದ ತಿಂಗಳು ಚಂದಮಾಮಾ ೧೨ ನೇ ಪುಟದ ಚಿತ್ರಗಳ ತಪ್ಪುಗಳು

1. ಹಲ್ಲಿಗೆ ಮುಂದಿನ ಕಾಲು ಹಿಂದೂ, ಹಿಂದಿನ ಕಾಲು ಮುಂದೂ ಇರಬೇಕು.
2. ಮನುಷ್ಯನಿಗೆ ಕುತ್ತಿಗೆ ಇರಬೇಕು.
3. ದಾರದ ಇನ್ನೊಂದು ಕೊನೆ ಸೂಜಿಯನ್ನು ದಾಟಿ ಬಂದಿರಬೇಕು.
4. ಮನೆಯ ಒಂದು ಬದಿ ಗೋಡೆಯ ಪಾರ್ಶ್ವ ಮಾತ್ರ ಕಾಣಬೇಕು.
5. ಸೀಸೆಯ ಬಾಯಿಗಿಂತ ಬಿರಡೆ ಸಣ್ಣಕಿರಬೇಕು.
6. ಕುರ್ಚಿಗೆ ನಾಲ್ಕು ಕಾಲುಗಳಿರಬೇಕು.
7. ಆಡಿನ 'ಗಡ್ಡ ಜೊಟ್ಟು' ಕೊರಳಿನಲ್ಲಿ ನೇತಾಡಬೇಕು.
8. ಡೇರೆಗೆ ಸುತ್ತೂ ಗೂಟದಲ್ಲಿಹಗ್ಗ ಕಟ್ಟಿರಬೇಕು.
9. ಗಾಳಿಬೀಸುವ ದಿಕ್ಕಿಗೇ ಮಳೆಯೂ ಬರಬೇಕು.

# ಫೋಟೋ ಶೀರ್ಷಿಕೆಯ ಸ್ಪರ್ಧೆ

### ಜನವರಿ ಫೋಟೋಗಳ ಫಲಿತಾಂಶ

ಜನವರಿ ತಿಂಗಳ ಚಂದಮಾಮದಲ್ಲಿ ಪ್ರಕಟಿಸುವ ಫೋಟೋಗಳಿಗೆ ನಮಗೆಬಂದ ಶೀರ್ಷಿಕೆಗಳಲ್ಲಿ ಉತ್ತಮವಾಗಿರುವ ಈ ಕೆಳಗಿನ ಶೀರ್ಷಿಕೆಗಳಿಗೆ ಬಹುಮಾನವೆಂದು ನಿರ್ಣಯಿಸಲಾಗಿದೆ.

ಶೀರ್ಷಿಕೆ:

ಮೊದಲನೇ ಫೋಟೋ:

ಪಸುಳೆಗಳು

ಎರಡನೇ ಫೋಟೋ:

ಪಸುಳೆಗಳ ಪರಿವಾರಗಳು

ಕಳಿಸಿದವರು:

ಪಿ. ಕೆ. ರಮಾನಂದ, ಉಡುಪಿ

ಬಹುಮಾನಪಡೆದ ಈ ಶೀರ್ಷಿಕೆಗಳನ್ನು, ಕಳುಹಿಸಿದವರ ಹೆಸರಿನೊಂದಿಗೆ, ಜನವರಿ ಚಂದಮಾಮದಲ್ಲಿ ಪ್ರಕಟಿಸುತ್ತೇವೆ. ಬಹುಮಾನದ ಮೊಬಲಗು ರೂ. 10/-ನ್ನು ಜನವರಿ ಸಂಚಿಕೆ ಹೊರಟಕೂಡಲೇ ಕಳುಹಿಸಲ್ಪಡುತ್ತದೆ.

★

## ಫಿಬ್ರವರಿ ತಿಂಗಳಲ್ಲಿ

ಪ್ರಕಟಿಸುವ ಫೋಟೋಗಳ ಮಾದರಿಯನ್ನು ವಿವರಗಳೊಂದಿಗೆ ಪಕ್ಕದ ಪುಟದಲ್ಲಿ ನೋಡಿ.

---

### ಮುಖ್ಯ ಸೂಚನೆ:

ನೀವು ಕಳುಹಿಸುವ ಶೀರ್ಷಿಕೆಗಳನ್ನು ಕಾರ್ಡಿನಲ್ಲಿಯೇ ಬರೆದುಕಳಿಸಬೇಕು. ಕೆಲವರು ಕಾಗದದಲ್ಲಿಬರೆದು ಕವರಿನಲ್ಲಿ ಕಳುಹಿಸುತ್ತಾರೆ. ಇಂತಹವುಗಳು ಪರಿಶೀಲಿಸಲ್ಪಡುವುದಿಲ್ಲ.

# ಫೋಟೋ ಶೀರ್ಷಿಕೆಯ ಸ್ಪರ್ಧೆ

ಫಬ್ರವರಿ 1953 : : ಬಹುಮಾನ 10/- ರೂ.





ಫಿಬ್ರವರಿ ಸಂಚಿಕೆಯಲ್ಲಿ ಬರುವ ಫೋಟೋಗಳು ಮೇಲೆ ಕಾಣಿಸಿರುತ್ತವೆ
ಇವುಗಳಿಗೆ ತಕ್ಕ ಒಂದು ಜತೆ ಶೀರ್ಷಿಕೆ ಬೇಕು.

1. ಶೀರ್ಷಿಕೆಗಳು ಫೋಟೋವಿಗೆ ಸರಿಹೊಂದುವಂತಿರಬೇಕು.
2. ಮುಪ್ಪಾದ ಒಂದು ಮಾತಾಗಲೀ, ಎರಡು ಮೂರು ಶಬ್ದಗಳ ಒಂದು ವಾಕ್ಯವಾಗಲೀ ಇರಬಹುದು.
3. ಮುಖ್ಯವಾಗಿ ಮೊದಲನೆಯ ಫೋಟೋವಿಗೂ ಎರಡನೆಯ ಫೋಟೋವಿಗೂ, ಒಂದಕ್ಕೊಂದು ಸಂಬಂಧಿಸಿಕೊಂಡಿರುವ ಮಾತುಗಳ ವಾಕ್ಯಗಳಾಗಿರಬೇಕು.
4. ಒಬ್ಬೊಬ್ಬರು ಒಂದೊಂದು ಜತೆ ವಾಕ್ಯಗಳಿಗಿಂತ ಹೆಚ್ಚಿಗೆ ಕಳಿಸಕೂಡದು.
5. ಒಂದು ಕಾರ್ಡಿನಲ್ಲಿ ನೀವು ಕಳುಹಿಸುವ ಶೀರ್ಷಿಕೆಗಳೂ, ನಿಮ್ಮ ಹೆಸರು, ವಿಳಾಸಗಳೂ ಸ್ಪಷ್ಟವಾಗಿರಬೇಕು.
6. ಡಿಸೆಂಬರ್ 10-ನೇ ತಾರೀಕಿನೊಳಗೆವಾಕ್ಯಗಳು ನಮಗೆ ಬಂದು ಸೇರಬೇಕು. ಅನಂತರ ಬಂದುವುಗಳಿಗೆ ಗಮನಕೊಡಲಾಗುವುದಿಲ್ಲ.
7. ನಮಗೆ ಸೇರಿದ ವಾಕ್ಯಗಳಲ್ಲೆಲ್ಲಾ ಅತ್ಯುತ್ತಮವಾದ ಒಂದು ಜತೆಗೆ (ಅಂದರೆ ಎರಡು ಫೋಟೋ ಶೀರ್ಷಿಕೆಗಳಿಗೂ ಸೇರಿ) ರೂ. 10/- ಬಹುಮಾನವಾಗಿ ಕೊಡಲ್ಪಡುವುದು.
8. ಶೀರ್ಷಿಕೆ ವಾಕ್ಯಗಳನ್ನು ಕಳುಹಿಸಬೇಕಾದ ವಿಳಾಸ:

: ಫೋಟೋ ಶೀರ್ಷಿಕೆಯ ಸ್ಪರ್ಧೆ :

ಚಂದಮಾಮ ಪಬ್ಲಿಕೇಷನ್ಸ್ ವಡಪಳನಿ ಪೋಸ್ಟ್ :: ಮದರಾಸು - 26.

Photo by B. Ranganathan



ಬಹುಮಾನ
ಪಡೆದ ಶೀರ್ಷಿಕೆ

ಕಲಿಯುವವ

ಕಳಿಸಿದವರು:
ಕೆ. ಎಚ್. ದೇಶಪಾಂಡೆ, ಧಾರವಾಡ

